ಶ್ರೀ

# ಕರ್ನಾಟಕ ಹರಿದಾಸ ಕೀರ್ತನ ತರಂಗಿಣಿ

## ಶ್ರೀ ವಾದಿರಾಜಸ್ವಾಮಿಗಳವರ ಕೃತಿಗಳು

-೫-



ಸುಬೋಧ ಪ್ರಕಟನಾಲಯ

ಬೆಂಗಳೂರು ನಗರ



ಸಂಗ್ರಹಕಾರರು . ದಾಸರ ಲಕ್ಷ್ಮೀನಾರಾಯಣರಾವ್.

ಪರಿಶೋಧಕರು . . . 'ಹರಿದಾಸ ಸೇವಾ ಸಮಿತಿ'

ಸಂಪಾದಕರು . . . . ಯಂ. ರಾಮರಾವ್.



ಸುಬೋಧ ಮುದ್ರಣಾಲಯ, ಬೆಂಗಳೂರು ನಗರ.

# ಅ ಕ್ಷ ರಾ ನು ಕ್ರ ಮ ಣಿ ಕೆ.




| ಪದದ ಪಲ್ಲವಿ | ಪುಟ | ಪದದ ಪಲ್ಲವಿ | ಪುಟ |
|---|---|---|---|
| ಶ್ರೀ ವೈಕುಂಠ ವರ್ಣನೆಯು | ೧೬೧ | ಎಂತುವರ್ಣಿಸಲಮ್ಮನಾನು | ೧೨೫ |
| ಶ್ರೀಶ ನೀನಹುದೋ ಶೇಷಾಚಲ | ೯ | ಎಂಥಾಪಾವನ ಪಾದವೋ ರಂಗೈ | ೪೧ |
| ಅಜನು ತೊಳೆದು ಅರ್ಚಿಸುವ | ೧೧೩ | ಎಕೆಯಾರೂ ನಿನಗೆ ಹೆಸುವು | ೧೦೦ |
| ಅತಿಗಾಧಾರವಿಲ್ಲ (ಉ.ಭೋ.) | ೧೨೩ | ಎನ್ನನುದ್ಧರಿಸಲಾಗದೆ ಚೆನ್ನ | ೧೨೨ |
| ಅನುದಿನವು ಶ್ರವಣ ಮನನಾದಿ | ೧೬ | ಎನ್ನಾಣೆ ಬೇಡ ಬೇಡವೋ | ೪೬ |
| ಅರಳಿದ ಕೆಂದಾವರೆಯು ಇರವ | ೧೧೬ | ಎಷ್ಟು ಸಾಹಸವಂತ ನೀನೆ | ೨೧ |
| ಅಹುದಹುದು ಹನುಮಂತ | ೨ | ಏನ ಹೇಳಲಿ ನಂಪರಿ ನಿನ್ನ | ೧೫೬ |
| ಆಂಜನೇಯನೆ ಅಮರವಂದಿತ | ೨೮ | ಏನು ಸುಕೃತ ಮಾಡಿದಳೋ | ೧೦ |
| ಆನಂದತೀರ್ಥರೆಂಬ ಅರ್ಥಿಯು | ೩೯ | ಒಂದು ಬಾರಿ ಸ್ಮರಣೆ ಸಾಲದೆ | ೩೦ |
| ಆನಂದಮಯಗೆ ಚಿನ್ಮಯಗೆ | ೩೦ | ಒಲ್ಲೆ ದುರಿತಗಳ ನಾನೊಲ್ಲೆ | ೨೪ |
| ಆಯರ್ನ ಯೋಗೆಧುರ್ಯನ | ೨೬ | ಕಾಲ ತೊಳೆದವನೊಬ್ಬ ತೊಳೆಸಿ | ೬೯ |
| ಆವರೀತಿಯಿಂದ ನೀನೆನ್ನ ಪಾ | ೧೨ | ಕಾಪಾಡೆಮ್ಮನು ಜಗವಕಾವ | ೧೨ |
| ಆರಿಗೆ ಆರೋ ನಿನ್ನ ಉಳಿದು | ೪೨ | ಕುದುರೆ ಬಂದಿದೆ ಚಲ್ವಕುದುರೆ | ೧೧೫ |
| ಆವಕುಲವೆಂದರಿಯ ಬಾರದು | ೫೨ | ಕೊಳ್ಳುಬೇಗ ಕಳ್ಳರ ತ್ರೀನಲ್ಲಿ | ೧೫೮ |
| ಇಂದಿರಾರಸ ಚಂದ್ರಮಂಡಲ | ೧೫ | ಕಂಜಾಕ್ಷ ಕಾಯಯ್ಯ ಕರುಣಾ | ೧೫೨ |
| ಇಂದಿರೆಯರಸ ಬಾರೋ | ೨೩ | ಕಂಡೆ ಕಂಡೆನು ಕೃಷ್ಣ ನಿನ್ನ | ೧೫೫ |
| ಈಗಲೋ ಇನ್ನ್ಯಾವಾಗಲೋ | ೧೮ | ಗುರುಹಿರಿಯರನುಸರಿಸಿ | ೪೨ |
| ಈತನೇ ಲೋಕಗುರು ವೇದ | ೩ | ಚರಣ ಕಮಲವನ್ನು ನೆನೆವೆ | ೧೧೫ |
| ಈತನೇ ಕಾಣಿರೋ ಮಧ್ವಮುನಿ | ೮೧ | ಜಯ ಜಯತು ಶುಭಕಾಯ | ೪ |
| ಈ ಮುದ್ದು ಕೃಷ್ಣನ ಕ್ಷಣಾದ | ೧೨೪ | ಜಯ ಮಂಗಳಂ ನಿತ್ಯ ಶುಭ | ೧೬೦ |

ಜೋಜೋ ಕಂದರ್ಪ ಕೋಟಿ ೧೨೪
ತಾಳುವಿಕೆಗಿಂತ ತಪವು ಇಲ್ಲ ೮೩
ದಾರಿಯ ತೋರೋ ಗೋಪಾಲ ೧೧೦
ದಿನಗಳನು ಕಳೆವ ಜನರೇ ೪೫
ಧವಳಗಂಗೆಯ ಗಂಗಾಧರ ಮಹ ೧
ನಮಸ್ತೇ ವಿಮಲ ಕೋಮಲೆ ೫
ನಾರಾಯಣ ನಾರಾಯಣ ೨೫
ನಾರಾಯಣ ನಾರಾಯಣ ೨೨
ನಾರಾಯಣ ನೆನೆಸೀ ೨೮
ನಿನ್ನ ದಾಸರದಾಸನೆಂತಾಹನೈ ೧೫೮
ನೀ ಕರುಣದಿಂದೆನ್ನ ಪಾಲಿಸ ೩೨
ನೀರೊಳು ಮುಳುಗಿ ನಿಗಮ ೧೧೧
ನೆನೆವೆ ನಾರಾಯಣನ ಪಾದವ ೫೮
ನೆನೆನೆ ಅನುದಿನ ನೀಲ ನೀರದ ೧೫೨
ನೆರೆ ನಂಬಿ ಪಡೆಯಿರೊ ಹಿತವ ೨೨
ಪಾವನ ಮಾಡುವುದು ನಾಮಾ ೧೨೪
ಪಾಥೇಯವ ಕಟ್ಟಿರೋ ನ್ವೈ ೧೧೩
ಪ್ರಾಣನ ನೋಡಿರ್ಯ ಮುಖ್ಯ ೩೯
ಬರಿದೆ ಸಂಸಾರದಿ ಬರಿದೆ ಮೆರೆ ೮೪
ಬಾರೈಯ ಯದುಕುಲ ತಿಲಕ ೬
ಬಾರೊ ಮುರಾರಿ ಬಾಲಕ ಶೌರಿ ೮೨
ಬಾಲನೇನೆ ನಿನ್ನ ಮಗನು ೧೩
ಬಿಟ್ಟು ಬನ್ನಿರೋ ಸಂಸಾರ ೧೦೯
ಬಿಡೆನು ಬಿಡೆನು ನಿನ್ನ ಚರಣ ೩೮
ಬೇಗ ಬಾರೋ ಬೇಗ ಬಾರೋ ೨
ಭೀಮಸೇನ ಕಾಮಿನಿಯಾದನು ೪೯
ಭೂರಿ ನಿಗಮವ ಕದ್ದ ಚೋರ ೧೨೯
ಮಧ್ವಾಂತರ್ಗತ ವೇದವ್ಯಾಸ ೫
ಮನ್ನಿಸೋ ನೀನೆನ್ನ ಮಧ್ವಮುನಿ ೨೫
ಮಾತುಮಾತಿಗೆ ಕೇಶವ ನಾರಾ ೮
ಮುದ್ದು ಮುಖದಾತ ನಮ್ಮ ೨೬
ಮಂಗಳಂ ಜಯ ಮಂಗಳಂ ೧೨೦
ಮುಂದು ಹಿಂದು ಎಂದೆಂದಿಗೂ ೮೧
ಯಾಕೆ ಮೈಮರೆತೆ ನೀನು ೧೨೧
ರಾಮಪದ ಸರಸೀರುಹಭೃಂಗ ೨೮
ರಂಗಬಾರೊ ನರಸಿಂಗ ಬಾರೊ ೩೧
ಲಕ್ಷ್ಮೀರಮಣಗೆ ಮಾಡಿದಳು ೧೦೧
ಲಾಲಿ ಲಾಲಿ ಹನುಮ ಭೀಮ ೨೦
ಲಾಲಿ ಶ್ರೀಹಯವದನ ಲಾಲಿ ೨೦
ಲೋಕಧರಿತನೋ ರಂಗನೇಕ ೧೩
ವಾಣೀ ಪರಮ ಕಲ್ಯಾಣಿ ೨
ವಿಷಯವಾಸೆ ಬಿಡಲೊಲ್ಲದೊ ೧೦
ಶೋಭನವೆನ್ನಿರೆ ಸುರರೋಳು
(ಶ್ರೀಲಕ್ಷ್ಮೀಶೋಭನ ಹಾಡು) ೧೩೦
ಸಕಲ ಸಾಧನವೆನಗೆ ಕೈಸೇರಿತು ೩೮
ಸಾರಿದೆನೋ ನಿನ್ನ ವೈಕುಂಠ ೧೨
ಸೇವಕನಲೊ ನಾನು ನಿನ್ನಯ ೧೧೧
ಹಣವೇ ನಿನ್ನಯ ಗುಣವೆನಿತು ೩೬
ಹನುಮಂತ ನೀ ಬಲು ಜಯ ೧೨೮
ಹರಿಭಜನೆಮಾಡೊ ನಿರಂತರ ೮೩
ಹರಿಪದವ ನೆನೆವಂಗೆ(ಸುಳಾದಿ) ೧೫೦
ಹ್ಯಾಂಗೆ ಕೊಟ್ಟ ಹೆಣ್ಣು ಸಾಗರ ೩೨
ಹೇಗೆ ಮೆಚ್ಚಿದೆ ಹೆಂಗಳರನ್ನೆ ೧೦೨
ಹೋಗುತಿದೆ ಹೊತ್ತು ಕಳೆದೆ ೧೦೮

# ಶುದ್ಧಾಶುದ್ಧ ಪತ್ರಿಕೆ.

| ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| ೬ | ೩ | ದ್ವಿಂಪದಲೆ | ದ್ವಿಂಪದಲಿ |
| ೮ | ೧ | ಸಿಂಹಯ್ಯ | ಸಹಾಯ |
| ೮ | ೨೪ | ಯಾಮಯಾಮಕು | ಯಾಮಯಾಮಕೆ |
| ೯ | ೨ | ಶೇಃಷಚಲ | ಶೇಂಷಾಚಲ |
| ೧೨ | ೨ | ಮರಿದೆ | ಮರೆದೆ |
| ೧೩ | ೫ | ರೂಪತಾಳ | ರೂಪಕತಾಳ |
| ೧೩ | ೧೪ | ವಾಸುದೇವನೆಂದು | ವಾಸುದೇವನೆಂದ |
| ೧೫ | ೧೯ | ವಿಷದಾರಿಗೆ | ವಿಷಧಾರಿಗೆ |
| ೧೬ | ೨೦ | ಮರುನಿನ | ಮರುಟಿನಕೆ |
| ೧೭ | ೬ | ವೈಕಟರನ್ನ | ವೆಂಕಟರನ್ನ |
| ೧೭ | ೧೬ | ವಿ ದ | ವಿವಿಧ |
| ೨೩ | ೧೩ | ಒನ್ನೊಡೆಯ | ಎನ್ನೊಡೆಯ |
| ೨೬ | ೨೧ | ಚರಿತನ | ಚರಿತ್ರನ |
| ೩೪ | ೮ | ಪದ್ಮವಲ್ಲಭದ | ಪದ್ಮವಲ್ಲಭನ |

(೩೫ ೩೬ನೇ ಪುಟಗಳಲ್ಲಿರುವ ೨೨-೨೩-೨೪ನೇ ನುಡಿಗಳ ಅಂತ್ಯದಲ್ಲಿ 'ಜಯ ಮಂಗಳಂ ನಿತ್ಯ ಶುಭಮಂಗಳಂ' ಎಂದು ಹೇಳಿಕೊಳ್ಳಬೇಕು.)

| ಪುಟ | ಪಙ್ತಿ | ಅಶುದ್ಧ | ಶುದ್ಧ |
|---|---|---|---|
| ೩೮ | ೬ | ಮೂರಾದೆ | ಮಾರೋದೆ (ಮೋಸಹೋಂದೆ) |
| ೪೧ | ೨೧ | ಶಿರದೊಳಿಟ್ಟ | ಶಿರದೊಳಿಟ್ಟು |
| ೪೪ | ೨೨ | ತುಂಬಿತ್ತು | ತುಂಬಿರ್ಪ |
| ೫೧ | ೨೦ | ಸೀಳುವನು | ಸೀಳುವೆನು |
| ೬೩ | ೧೫ | ಘುರ್ಮಮಯ | ಧರ್ಮಮಯ |
| ೬೩ | ೧೮ | ಹೆಮ್ಮಗಳ | ಹೆಮ್ಮೆಗಳ |

| | | | |
|---|---|---|---|
| ೬೩ | ೧೮ | ಹಾಬ್ಬಿಟ್ಟಿದೆನು | ಹೆಬ್ಬಿಟ್ಟಿದನು |
| ೬೩ | ೨೩ | ಮುದ್ಪಟ | ಮುದ್ಭಟ |
| ೭೦ | ೧೦ | ಆಲಯದಿ | ಆ ಲಯದಿ |
| ೭೬ | ೧೩ | ತಂತೆದೆಯ | ತಂದೆಯ |
| ೯೦ | ೭ | ದ್ವಾಸುಪರ್ಣ ಸಾಯುಜ ಸಹ | ದ್ವಾಸುಪರ್ಣಾ ಸಯುಜಾ ಸಖಾ |
| ೯೦ | ೧೧ | ಎನಿವ | ಎನಿಪ |
| ೯೧ | ೨೪ | ಯೆರಿಯೆ | ಯರಿಯೆ |
| ೯೪ | ೬ | ಸತ್ಯಾಂತಪಾದ | ಸತ್ಯಾಂತವಾದ |
| ೧೦೧ | ೧೭ | ತುರಗವನೇಸಿ | ತುರಗವನೇರಿ |
| ೧೦೪ | ೨೮ | ಬಲವಿಂದ | ಒಲವಿಂದ |
| ೧೦೮ | ೨ | ಕುಗ್ಗಿನ | ಕುಗ್ಗಿದ |
| ೧೧೪ | ೧೫ | ಬೆಳಿ ಸುಬಿತ್ತು | ಬೆಳಸು ಬಿತ್ತು |
| ೧೧೬ | ೧೫ | ಪಾಲ್ಗಳ | ಸಾಲ್ಗಳ |
| ೧೧೬ | ೨೨ | ಕೊಡೆಗಳ | ತೊಡೆಗಳ |
| ೧೧೭ | ೭ | ವರಭಯುವ | ವರಾಭಯುವ |
| ೧೧೭ | ೧೦ | ಪಾಲ | ಫಾಲ |
| ೧೧೭ | ೧೧ | ಕೂರುವ | ಕೂರುಮ |
| ೧೧೮ | ೨ | ಪಾಯು | ಪಾಟು |
| ೧೧೯ | ೨೫ | ನರಸಿಂಹಗರ್ಪಿಸುವ | ನರಸಿಂಹಗರ್ಪಿಸಿದ |
| ೧೨೧ | ೭ | ನಿನ್ನ ಕೆಡುವೆ | ಕೆಡುವೆ ನಿನ್ನ |
| ೧೨೧ | ೨೬ | ಅದಸಾವ | ಅದು ಸಾವ |
| ೧೨೪ | ೨೧ | ನಾಶಿಕ | ನಾಸಿಕ |
| ೧೩೧ | ೩೧ | ಕಾಂಚನದಾಮ | ಕಾಂಚೀದಾಮ |
| ೧೪೧ | ೯ | ತೊಟ | ತೊಟ್ಟ |
| ೧೪೪ | ೧೭ | ಪೀಢದಿ | ಪೀಠದಿ |
| ೧೪೯ | ೧೨ | ಅಸುರ್ರ | ಅಸುರ |

(೧೫೨ನೆ ಪುಟದಲ್ಲಿ ಪದಸಂಖ್ಯೆ ೫೭, ೧೫೫ರಲ್ಲಿ ೫೮, ೧೫೬ರಲ್ಲಿ ೫೯, ೧೫೭ರಲ್ಲಿ ೬೦, ೧೫೮ರಲ್ಲಿ ೬೧-೬೨ ಮತ್ತು ೧೬೦ನೇ ಪುಟದಲ್ಲಿ ೬೩, ಇವುಗಳಿಗೆ ಬದಲಾಗಿ, ದಯವಿಟ್ಟು, ಪದಸಂಖ್ಯೆಗಳನ್ನು ಕ್ರಮವಾಗಿ ೮೭, ೮೮, ೮೯ ೯೦, ೯೧, ೯೨, ೯೩ ಎಂದು ಓದಿಕೊಳ್ಳಬೇಕು.)

| | | | |
|---|---|---|---|
| ೧೫೯ | ೧೦ | ಪರಿಹರಿಸಿ | ಅಪಹರಿಸಿ |
| ೧೬೩ | ೧೩ | ಗುಣ್ಯೆರ ಸಾಮ್ಯೋನಾತಿ — | ಸಾಮ್ಯೋನತಿ |
| ೧೭೭ | ೧೬ | ತುಹಿತ | ತುಹಿನ |
| ೧೭೯ | ೭ | ಚಿತ್ತ | ಚಿತ್ರ |
| ೧೮೩ | ೫ | ಅಜ್ಞನಾಥ ನಗ್ನ | —ಯಜ್ಞ |
| ,, | ೨೧ | ಹರಿಯುರ ಮನೆಯ | ಹರಿಯುರಮನೆಯ |
| ೧೮೪ | ೧೫ | ನವ್ಯಥಂಚಿತ | ನವ್ಯಥಂತಿಚ |
| ೧೮೯ | ೧೪-೧೯ | ತಪದಂತೊಡಗಿದ | ತಪ್ಪದಂತೊಡಗಿದ |
| ೧೯೦ | ೫ | ಶುದ್ಧ ಪ್ರಾಕೃತವಾದ | ಶುದ್ಧ ಅಪ್ರಾಕೃತವಾದ |
| ,, | ೧೭ | ನಿತ್ಯ ಪ್ರಾಕೃತವಾದ | ನಿತ್ಯ ಅಪ್ರಾಕೃತವಾದ |
| ೧೯೧ | ೪ | ಆ ಲಿಂಗನದ | ಆಲಿಂಗನದ |
| ೧೯೬ | ೧೦ | ತವಕದಿಂದೊಂದು | ತವಕದಿಂದೊಂದೊಂದು |
| ೧೯೭ | ೮ | ಅನಂತನ ತನಗೊಂದು | ಅನಂತಾನಂತವಾಗಿಪ್ಪುದೊಂದು |
| ,, | ೨೩ | — | ಹ |
| ೨೦೮ | ೧೧ | ಕೋವಿದವರಿಗೆ | ಕೋವಿದರಿಗೆ |
| ೨೧೬ | ೨೧ | ಕೂಡ ಕೊಂಡುಂಬ | ಕೂಡಿಕೊಂಡುಂಬ |
| ೨೧೯ | ೨೦ | ತಂಬು | ತಂದು |
| ೨೨೩ | ೩ | ಪದುವ | ಪದುಮ |
| ,, | ೧೨ | ಪರ್ಯಾಮ | ಪರ್ಯಾಯ |
| ೨೩೫ | ೧೫ | ಯಿಲ್ಲದೆಲೆ | ಇಲ್ಲದಲೆ |



ಶ್ರೀ ಕರ್ನಾಟಕ ಹರಿದಾಸ ಕೀರ್ತನ ತರಂಗಿಣಿಗೆ ಈ ಕೆಳಗೆ ಹೇಳುವ ಮಹನೀಯರು ದ್ರವ್ಯ ಸಹಾಯ ಮಾಡಿರುತ್ತಾರೆಯಾಗಿ, ಈ ಧರ್ಮಾತ್ಮರಿಗೆ ಅತ್ಯಂತ ಕೃತಜ್ಞರಾಗಿದ್ದೇವೆ.

೧. ರಾಜಸಭಾಭೂಷಣ, ವಿದ್ಯಾಭೂಷಣ
ಮ|| ರಾ|| ಶ್ರೀ ಕರ್ಪೂರ ಶ್ರೀನಿವಾಸರಾಯರವರು, ರೂ ೧೫೦.

೨. ಮ|| ರಾ|| ಶ್ರೀ ದೇಶಮುಖ್ ಗೋವಿಂದರಾಯರವರು
ಎರಡು ವರ್ಷಕಾಲ ವರ್ಷ ೧ಕ್ಕೆ ೬೦ ರೂಪಾಯಿಗಳ ಮೇರೆಗೆ.

೩. ಮ|| ರಾ|| ಶ್ರೀ ಜಿ. ಸಿಂಹ. ವೇಜಸ್ ಡಿಪಾರ್ಟ್‌ಮೆಂಟ್, ತಾತಾ ಐರನ್ ಮತ್ತು ಸ್ಟೀಲ್ ಕಂಪೆನಿ ಲಿಮಿಟೆಡ್, ಜಂಷೇಡ್‌ಪುರ್,
ಎರಡು ವರ್ಷಕಾಲ, ವರ್ಷ ೧ಕ್ಕೆ ೬೦ ರೂಪಾಯಿಗಳ ಮೇರೆಗೆ.

೪. ಮ|| ರಾ|| ಶ್ರೀ ಬಿ. ನಾಗಪ್ಪನವರು, ಬಾರ್-ಅಟ್-ಲಾ
ಗವರ್ನಮೆಂಟು ಲಾ ಮೆಂಬರು. (ರಿಟೈರ್ಡ್) ೨೫೦ ರೂಪಾಯಿಗಳು.

---

|| ಶ್ರೀರಾಮಸಹಾಯಂ ||

# *ಶ್ರೀ ವಾದಿರಾಜಸ್ವಾಮಿಗಳವರ ಚರಿತ್ರೆ



ಶ್ರೀವಾಯುದೇವರ ಮೂರನೆಯ ಅವತಾರದಿಂದ ಕಲಿಯುಗದಲ್ಲಿ ಅವತರಿಸಿದ ಶ್ರೀಮನ್ಮಧ್ವಾಚಾರ್ಯರು, ದ್ವೈತಮತವನ್ನು ಸ್ಥಾಪಿಸಿ, ರೌಪ್ಯ ಪೀಠಪುರೀ (ಉಡುಪೀ) ಕ್ಷೇತ್ರದಲ್ಲಿ ಶ್ರೀ ಕೃಷ್ಣಮೂರ್ತಿಯ ದಿವ್ಯ ಸುಂದರ ವಿಗ್ರಹವನ್ನು ಪ್ರತಿಷ್ಠಿಸಿ, ಧರ್ಮಸಂಸ್ಥಾಪನೆಯ ಮೂಲಕ ಲೋಕೋದ್ಧಾರಮಾಡಿದ ವೃತ್ತಾಂತವನ್ನು ಅರಿಯದವರಾರು! ಶ್ರೀಮದಾ ಚಾರ್ಯರ ಜನಕರಾದ ಮಧ್ಯಗೇಹ ಭಟ್ಟರ ಉದರದಲ್ಲಿ ಆಚಾರ್ಯರ ತರು ವಾಯ ಅವರ ಅನುಜರಾಗಿ ವಿಷ್ಣುತೀರ್ಥರೆಂಬುವರು ಜನ್ಮತಾಳಿ, ಆಚಾ ರ್ಯರ ಬಳಿ ಶಿಷ್ಯರಾಗಿ ವಿದ್ಯಾಭ್ಯಾಸಮಾಡಿ, ಸುಬ್ರಹ್ಮಣ್ಯ ಮಠಕ್ಕೆ ಸನ್ಯಾ ಸವನ್ನು ಪಡೆದರಷ್ಟೆ! ಶ್ರೀವಿಷ್ಣುತೀರ್ಥರಿಗೆ ಸೋದೇಮಠದ ಪೀಠಸ್ಥ ರಾದ ಶ್ರೀ ವ್ಯಾಸತೀರ್ಥರೆಂಬುವರು ಶಿಷ್ಯಕೋಟಿಗೆ ಸೇರಿದವರು. ಶ್ರೀ ವ್ಯಾಸತೀರ್ಥರಿಂದ ೧೭ನೆಯವರು ಶ್ರೀ ವಾಗೀಶ ತೀರ್ಥರೆಂದು ಪ್ರಖ್ಯಾತ ರಾಗಿ ಸೋದೇ ಮಠದಲ್ಲಿ ಗುರುಪೀಠವನ್ನಲಂಕರಿಸಿದರು. ಇವರು ಮಹಾ ತಪಸ್ವಿಗಳೂ, ಯೋಗಮರ್ಮಜ್ಞರೂ, ಮಹಾಪಂಡಿತರೂ, ತ್ರಿಕಾಲ ಜ್ಞಾನಿಗಳೂ ಶಾಪಾನುಗ್ರಹಶಕ್ತರೂ ಆಗಿ ಧರ್ಮರಕ್ಷಣೆ ಮಾಡುತ್ತಾ ಇದ್ದರು.

---

*ಈ ಸಂಕ್ಷೇಪ ಚರಿತ್ರೆಗೆ ಉಡುಪಿ ಶ್ರೀಮನ್ಮಧ್ವ ಸಿದ್ಧಾಂತ ಗ್ರಂಥಾಲಯದ ಶ್ರೀ ವಾದಿರಾಜ ಗುರು ಚರಿತ್ರೆ ಎಂಬ ಗ್ರಂಥವೂ, ಬೆಂಗಳೂರಿನ ಮಾಧ್ವಮಂಡಲೀಯವರಿಂದ ಪ್ರಕಟವಾದ ಶ್ರೀ ವಾದಿರಾಜ ಸ್ವಾಮಿಗಳ ಕಥಾ ಎಂಬ ಗ್ರಂಥವೂ ಆಧಾರವಾಗಿರುವುದರಿಂದ ಆಯಾ ಗ್ರಂಥಕರ್ತರಿಗೆ ಕೃತಜ್ಞರಾಗಿದ್ದೇವೆ.

ಆ ಕಾಲದಲ್ಲಿ ಪಶ್ಚಿಮ ಸಮುದ್ರದ ಕರೆಯಲ್ಲಿದ್ದ ಕುಂಭಾಸಿ ಎಂಬೊಂದು ಕ್ಷೇತ್ರದ ಪೂರ್ವದಿಕ್ಕಿಗೆ ಸ್ವಲ್ಪ ದೂರದಲ್ಲಿ ಕುಸುಮಾಕರ ಅಥವ ಹೂವಿನಕೆರೆ ಎಂಬೊಂದು ಗ್ರಾಮದಲ್ಲಿ ರಾಮಾಚಾರ್ಯನೆಂಬೊಬ್ಬ ಬ್ರಾಹ್ಮಣೋತ್ತಮನು ವಾಸಿಸುತ್ತಿದ್ದನು. ಆತನಿಗೆ ದೇವಭಟ್ಟನೆಂಬ ನಾಮಾಂತರವೂ ಉಂಟು. ಸರಸ್ವತಿಯೆಂಬ ಸಾಧ್ವಿಯು ಆತನಿಗೆ ಪತ್ನಿಯಾಗಿ ಆಶ್ರಮ ಧರ್ಮರಕ್ಷಣೆಗೆ ಅನುಕೂಲಳಾಗಿದ್ದಳು. ಸಾತ್ವಿಕರಾದ ಆ ದಂಪತಿಗಳು ಸದಾ ಸತ್ಕಾರ್ಯಾನುಷ್ಠಾನ ಪರರಾಗಿಯೂ ಅತಿಥಿ ಅಭ್ಯಾಗತರ ಸೇವಾ ತತ್ಪರರಾಗಿಯೂ ಕಾಲಯಾಪನೆ ಮಾಡುತ್ತಿದ್ದರು. ಹೀಗೆ ಬಹು ದಿನಗಳು ಕಳೆದರೂ ಅವರಿಗೆ ವಂಶೋದ್ಧಾರಕ ಸಂತಾನವಾಗದೆ ವ್ಯಸನವು ಮಿತಿಮೀರಿತು. ಸಾಧ್ವೀ ಸರಸ್ವತಿಯು ಪುತ್ರಾಕಾಂಕ್ಷೆಯಿಂದ ಕಂಡ ಕಂಡ ದೇವರಿಗೆಲ್ಲ ಕೈ ಮುಗಿದು ಹರೆಸಿಕೊಳ್ಳುವಳು. ಒಂದಾನೊಂದು ವೇಳೆ, ತನಗೆ ಪುತ್ರ ಸಂತಾನವಾದರೆ ದೇವರಿಗೆ ಲಕ್ಷಾಭರಣಗಳನ್ನು ಸಮರ್ಪಿಸುವೆನೆಂದೂ ಬೇಡಿಕೊಂಡಳು. ಕೊನೆಗವರು, ತ್ರಿಕಾಲಜ್ಞರೆಂದೂ ನಿಗ್ರಹಾನುಗ್ರಹ ಸಮರ್ಥರೆಂದೂ ಪ್ರಸಿದ್ಧರಾದ ಶ್ರೀ ವಾಗೀಶತೀರ್ಥ ಶ್ರೀ ಪಾದಂಗಳವರ ಆಶ್ರಯಹೊಂದಿ ಪುತ್ರಭಿಕ್ಷೆಯನ್ನು ಬೇಡಿದರು. ಶ್ರೀಗಳವರು, ಆ ದಂಪತಿಗಳ ಭವಿಷ್ಯತ್ ಸ್ಥಿತಿಗತಿಗಳನ್ನು ತಮ್ಮ ಜ್ಞಾನ ದೃಷ್ಟಿಯಿಂದ ತಿಳಿದು, ಹಸನ್ಮುಖದಿಂದ ಫಲ ಮಂತ್ರಾಕ್ಷತೆಗಳನ್ನಿತ್ತು ಪುತ್ರಲಾಭಕ್ಕಾಗಿ ಅನುಗ್ರಹಮಾಡಿದರು. ಆದರೆ, ಶಿಶು ಜನನವಾದೊಡನೆಯೇ ಅದನ್ನು ನೆಲಕ್ಕೆ ಸೋಕಿಸದಂತೆ ತಂದು ಮಠಕ್ಕೆ ಒಪ್ಪಿಸಬೇಕೆಂದು ಆಜ್ಞಾಪಿಸಿದರು. ಶ್ರೀಗಳವರ ವಾರ್ತೆಯನ್ನು ಕೇಳಿ ಆ ದಂಪತಿಗಳಿಗೆ ಪರಮಾನಂದವಾದರೂ ವ್ಯಸನವುಂಟಾಗದಿರಲಿಲ್ಲ. ಮಹಾತ್ಮರ ಅನುಗ್ರಹಬಲದಿಂದ ಪುತ್ರಲಾಭವಾಗುವುದೆಂದು ಮುಖವು ಅರಳಿದರೂ ಒಡನೆ ಆ ಪುತ್ರನು ತಮಗೆ ದಕ್ಕತಕ್ಕವನಲ್ಲವೆಂದು ತಿಳಿದು ಸಂಕುಚಿತವಾಗದಿರಲಿಲ್ಲ. ಆದರೂ ಉಪಾಯವಿಲ್ಲದೆ ಫಲಮಂತ್ರಾಕ್ಷತೆಗಳನ್ನು ಪಡೆದು ಮನೆಗೆಬಂದರು.

ಮುಂದೆ ಕೆಲವು ದಿನಗಳಲ್ಲೇ ಸಾಧ್ವೀ ಸರಸ್ವತಿಯು ಗರ್ಭಧಾರಣ ಮಾಡಿ, ಮಹಾತೇಜಸ್ವಿನಿಯಾಗಿ ಪ್ರಕಾಶಿಸಿದಳು. ಆಕೆಯನ್ನು ಕಂಡವ

ರೆಲ್ಲ, ಈಕೆಯು ಗರ್ಭದಲ್ಲಿ ಯಾರೋ ಮಹಾತ್ಮರು ಉದಯಿಸಲಿರುವರೆಂದು ಭಾವಿಸುವಂತೆ ಆಕೆಯು ಸದಾ ಧರ್ಮವಿಚಾರಗಳಲ್ಲೇ ತೊಡಗಿದ ಚಿತ್ತವೃತ್ತಿಯುಳ್ಳವಳಾಗಿ ಪುಣ್ಯ ತೀರ್ಥಕ್ಷೇತ್ರಗಳ ಸಂದರ್ಶನವನ್ನು ಬಯಸುತ್ತ ಹಾಗೆಯೇ ಒಂಬತ್ತು ತಿಂಗಳ ಗರ್ಭ ಭಾರವನ್ನು ವಹಿಸಿದಳು. ಪ್ರಸವ ವೇದನೆಯು ತೋರಿತೆಂದೊಡನೆಯೇ ಮೊದಲೇ ಸಂಕೇತವಾಗಿದ್ದಂತೆ, ಶ್ರೀಗಳವರು ಒಂದು ಬಂಗಾರದ ತಟ್ಟೆಯನ್ನು ಕಳುಹಿಸಿ, ಭೂಸ್ಪರ್ಶವಾಗದಂತೆ ಶಿಶುವನ್ನು ಅದರಲ್ಲೇ ಪತನಮಾಡಿಸಿ ಮಠಕ್ಕೆ ತರಿಸಿಕೊಂಡರು. ಅಲ್ಲಿ ಶ್ರೀ ಕೃಷ್ಣಮೂರ್ತಿಗೆ ಅಭಿಷೇಕವಾದ ಕ್ಷೀರವನ್ನೇ ಆ ಶಿಶುವಿಗೆ ಪ್ರಥಮಕ್ಕೆ ಪ್ರಾಶನ ಮಾಡಿಸಿದರು. ಶ್ರೀ ವಾಗೀಶರು ಮಗುವನ್ನು ಸ್ಪರ್ಶಮಾಡಿ ಎತ್ತಿಕೊಂಡಾಗ ಅದು ಎರಡು ಕೈಗಳನ್ನೂ ತಲೆಯ ಮೇಲಕ್ಕೆ ಒಯ್ದು ವಂದಿಸಿತಂತೆ! ಆ ಕೌತುಕವನ್ನು ಕಂಡು ಎಲ್ಲರೂ ಪರಮಾಶ್ಚರ್ಯಭರಿತರಾದರು. ತರುವಾಯ ಶಿಶುವನ್ನು ವರಾಹ ಎಂದು ಹೆಸರಿಟ್ಟು ಕರೆದು ಅದರ ಬಾಲಲೀಲಾ ವಿನೋದದ ಸುಖಾನುಭವ ಭಾಗ್ಯವು ಆ ಮಾತಾಪಿತೃಗಳಿಗೆ ತಪ್ಪಬಾರದೆಂದು ಮಹಾನುಭಾವರಾದ ಶ್ರೀಗಳವರು, ಆ ಶಿಶುವು ಬೆಳೆದು ಉಪನಯನ ಯೋಗ್ಯ ವಯಸ್ಕನಾಗುವವರೆಗೂ ನಿಮ್ಮ ಮನೆಯಲ್ಲೇ ಇಟ್ಟುಕೊಂಡು ಕಾಪಾಡಿರೆಂದು ತಂದೆತಾಯಿಗಳ ವಶಕ್ಕೇ ಒಪ್ಪಿಸಿದರು. ಈ ಶಿಶುವೇ ಮುಂದೆ **ಶ್ರೀ ವಾದಿರಾಜ**ರೆಂದು ಪ್ರಸಿದ್ಧರಾದ ನಮ್ಮ ಚರಿತ್ರನಾಯಕರು. ಇವರು ವಾಯುಪದವಿಗೆ ಯೋಗ್ಯಾಧಿಕಾರಿಗಳಾದ ನೂರುಮಂದಿ ಋಜುಗಣಸ್ಥರಲ್ಲಿ ಮುಂದಿನ ಕಲ್ಪದಲ್ಲಿ ಪ್ರಧಾನ ವಾಯುಪದಕ್ಕೆ ಬರತಕ್ಕ ಲಾತವ್ಯರೆಂಬ ದೇವತಾವತಾರರೆಂದು ಪ್ರಸಿದ್ಧವಿದೆ. ಇವರ ಅವತಾರವು ಶಾ. ಶ. ೧೪೦೩ಕ್ಕೆ ಸರಿಯಾದ ಶಾರ್ವರಿ ಸಂವತ್ಸರದಲ್ಲಿ ಆಯಿತೆಂದು ಪ್ರತೀತಿಯಿದೆ.

ಶ್ರೀಗಳವರ ಆಜ್ಞೆಯಂತೆ, ಆ ದಂಪತಿಗಳು ಶಿಶುವನ್ನು ಮನೆಗೆ ಕರೆತಂದು, ಅದರ ಬಾಲಲೀಲೆಗಳಿಂದ ಸ್ವರ್ಗಸುಖವನ್ನೇ ಅನುಭವಿಸುತ್ತ ಅತಿಶಯ ಪ್ರೇಮಾದರಗಳಿಂದ ಪಾಲಿಸಿದರು. ಐದನೆಯ ವಯಸ್ಸು ನಡೆಯುತ್ತಿರಲು ಅಕ್ಷರಾಭ್ಯಾಸ ಕರ್ಮವನ್ನೂ ಗರ್ಭಾಷ್ಟಮದಲ್ಲಿ ಉಪನಯನವನ್ನೂ ನೆರವೇರಿಸಿ ರಾಮಾಚಾರ್ಯರು ತಮ್ಮ ಮಗುವಿಗೆ ವಿದ್ಯಾಬೋಧನೆ

ಮಾಡತೊಡಗಿದರು. ಅಸಾಮಾನ್ಯ ಪ್ರಜ್ಞಾ ಪ್ರಕಟನೆಯು ಆ ಚಿಕ್ಕ ವಯಸ್ಸಿನಲ್ಲೇ ಕಂಡು ಬಂದುದರಿಂದ ಇತರರ ದೃಷ್ಟಿ ದೋಷವಾದೀ ತೆಂದು ಆಚಾರ್ಯರು ತಮ್ಮ ಮಗನಿಗೆ ಗೋಪ್ಯವಾಗಿ ಮನೆಯಲ್ಲೇ ಪಾಠ ಹೇಳುತ್ತಿದ್ದರು.

ವರಾಹ ಬಾಲಕನಿಗೆ ಎಂಟೊಂಬತ್ತನೆಯ ವಯಸ್ಸು ನಡೆಯುತ್ತಿದ್ದಾಗ್ಗೆ ಶ್ರೀಗಳವರು-ಬಾಲಕನನ್ನು ಮಠಕ್ಕೆ ತಂದು ಬಿಡಿರೆಂದು ರಾಮಾಚಾರ್ಯರಿಗೆ ಹೇಳಿಕಳುಹಿಸಿದರು. ತಮ್ಮ ಪ್ರಿಯ ಪುತ್ರನನ್ನು ಅಗಲಬೇಕಾದ ಪ್ರಸಂಗವು ಪ್ರಾಪ್ತವಾದುದಕ್ಕಾಗಿ ಅತಿಶಯ ಚಿಂತಾಕ್ರಾಂತರಾದ ಅವರನ್ನು ಸಮಾಧಾನ ಪಡಿಸಿ ಮತ್ತೊಬ್ಬ ಪುತ್ರನುದಯಿಸುವಂತೆ ಶ್ರೀಗಳವರು ಪುನಃ ಫಲ ಮಂತ್ರಾಕ್ಷತೆಗಳನ್ನು ಪ್ರಸಾದಿಸಿ ಅವರಿಗೆ ಸಂತೋಷವನ್ನುಂಟುಮಾಡಿದರು. ತರುವಾಯ ಮಠದಲ್ಲೇ ವಾಸಿಸುತ್ತಾ ವಿದ್ಯಾಭ್ಯಾಸ ಮಾಡುತ್ತಿದ್ದ ವರಾಹನ ಅಲೌಕಿಕ ಬುದ್ಧಿ ಸಾಮರ್ಥ್ಯವನ್ನೂ ಗುಣ ನಡತೆಗಳನ್ನೂ ವಿನಯ ವಿಧೇಯತೆಗಳನ್ನೂ ಕಂಡು ಶ್ರೀಗಳವರು ಪರಮಾನಂದಪಟ್ಟು ಮುಂದೊಂದು ಶುಭ ಮುಹೂರ್ತದಲ್ಲಿ ಆತನಿಗೆ ಪರಮ ಹಂಸ ಪದವಿಗೆ ಪಟ್ಟಕಟ್ಟಿ **ಶ್ರೀವಾದಿರಾಜ ತೀರ್ಥರು** ಎಂಬ ಹೆಸರಿನಿಂದ ಸಂಬೋಧಿಸಿ, ಆಶ್ರಮಧರ್ಮಗಳನ್ನೂ ಭೂವರಾಹಸ್ವಾಮಿಯ ಪೂಜಾ ವಿಧಿಗಳನ್ನೂ ಬೋಧಿಸಿದರು.

ಬಾಲ ಯತಿ ವಾದಿರಾಜ ತೀರ್ಥರು ಯತ್ಯಾಶ್ರಮ ಚಿನ್ಹೆಗಳಾದ ದಂಡ ಕಮಂಡಲುಗಳನ್ನು ಹಿಡಿದು ಸನಕಾದಿ ಬಾಲ ಯತಿಗಳ ಮಾನುಷ ರೂಪವೋ ಎಂಬಂತೆ ಪ್ರಕಾಶಿಸುತ್ತ, ಶ್ರೀ ಗುರುಗಳ ಆಜ್ಞೆಯನ್ನನುಸರಿಸಿ ವಿದ್ಯಾಭ್ಯಾಸಕ್ಕಾಗಿ, ವಿದ್ಯಾನಗರ (ಹಂಪೆ) ದಲ್ಲಿ ರಾಜಗುರುಗಳಾಗಿದ್ದ ಸುಪ್ರಸಿದ್ಧ ಶ್ರೀ ವ್ಯಾಸರಾಯ ಸ್ವಾಮಿಗಳವರಲ್ಲಿ ಬಂದು ಸೇರಿ, ಅರುವತ್ನಾಲ್ಕು ವಿದ್ಯೆಗಳಲ್ಲೂ ಪರಿಶ್ರಮಹೊಂದಿ ವಿದ್ಯಾನಿಧಿಗಳಾದರು. ವಿದ್ಯಾಭ್ಯಾಸಾನಂತರದಲ್ಲಿ ಗುರುಗಳ ಆಜ್ಞೆಯನ್ನು ಪಡೆದು ಆದ್ಯಂತ ಭರತಖಂಡದಲ್ಲಿ ತೀರ್ಥಯಾತ್ರಾ ವ್ಯಾಜದಿಂದ ಸಂಚರಿಸಿ, ಅಲ್ಲಲ್ಲಿ ತಾವು ಸಂದರ್ಶಿಸಿದ ಸಮಸ್ತ ತೀರ್ಥಕ್ಷೇತ್ರಗಳ ವಿಚಾರವನ್ನೂ 'ತೀರ್ಥಪ್ರಬಂಧ' ವೆಂಬೊಂದು ಗ್ರಂಥರತ್ನದಲ್ಲಿ ವಿವರಿಸಿ ರಚಿಸಿದರು.

ಈ ದೇಶಸಂಚಾರ ಕಾಲದಲ್ಲಿ ಶ್ರೀ ವಾದಿರಾಜರಿಂದ ಶಿಷ್ಯೋದ್ಧಾರಕ್ಕಾಗಿ, ಹಲವು ಆಶ್ಚರ್ಯಕರ ಮಹಿಮೆಗಳು ಪ್ರಕಟಿಸಲ್ಪಟ್ಟುವು. ಅವುಗಳಲ್ಲಿ ಸ್ಥಳಾಭಾವದಿಂದ ಇಲ್ಲಿ ಕೆಲವನ್ನು ಮಾತ್ರ ಕೊಡುತ್ತೇವೆ.

ಒಬ್ಬಾನೊಬ್ಬ ಶ್ರೀಮಂತನಲ್ಲಿ ವಿವಾಹ ಮಹೋತ್ಸವವು ನಡೆಯುತ್ತಿದ್ದಾಗ್ಗೆ, ಮದು ಮಗನು ಹೇಗೋ ತಲೆಯ ರುಮಾಲಿನಲ್ಲಿ ಸೇರಿದ್ದ ಮರಿ ನಾಗರಹಾವಿನಿಂದ ಕಡಿಯಲ್ಪಟ್ಟು ವಿಷವೇರಿ ಒಡನೆ ಮೃತನಾದನು. ವಿವಾಹ ಮಂಗಳ ಕಾರ್ಯಗಳೆಲ್ಲವೂ ಒಡನೆ ನಿಂತು, ಮನೆಯು ಸ್ಮಶಾನ ಸದೃಶವಾಯಿತು. ಆಗ ಶ್ರೀಗಳವರು, ಆ ಶವವನ್ನು ತರಿಸಿ, *ಲಕ್ಷ್ಮೀಶೋಭನವೆಂಬ ಪದವನ್ನುಚ್ಚರಿಸಿ ಶ್ರೀ ಲಕ್ಷ್ಮೀನಾರಾಯಣರ ಅನುಗ್ರಹದಿಂದ ಆತನನ್ನು ಬದುಕಿಸಿದರು.

ಅವರ ಸಂಚಾರ ಕಾಲದಲ್ಲಿ ಒಬ್ಬಾನೊಬ್ಬ ಶ್ರೀಮಂತನು ಬಂದು ಶ್ರೀಗಳವರನ್ನು ಸಂದರ್ಶಿಸಿ ಪುತ್ರಭಿಕ್ಷೆಯನ್ನು ನೀಡಿರೆಂದು ಬೇಡಿದನು. ಶ್ರೀ ವಾದಿರಾಜರು ಜ್ಞಾನದೃಷ್ಟಿಯಿಂದ ಅವನ ಭವಿಷ್ಯದ್ಗತಿಯನ್ನು ತಿಳಿದವರಾಗಿ-'ಅಯ್ಯಾ ನಿನಗೆ ಈ ಜನ್ಮದಲ್ಲಿ ಸಂತಾನ ಯೋಗವಿಲ್ಲ'ವೆಂದು ನುಡಿದು ಕಳುಹಿಸಿಬಿಟ್ಟರು. ಕೆಲವು ದಿನಗಳಮೇಲೆ, ಆ ಶ್ರೀಮಂತನು ತನ್ನ ಊರಿಗೆ ಬಂದ ಪ್ರಸಿದ್ಧ ಮಾಂತ್ರಿಕನೆಂದು ಹೆಸರಾದ ಒಬ್ಬ ಮುಸಲ್ಮಾನ್ ಫಕೀರನನ್ನು ಆಶ್ರಯಿಸಿ ಒಬ್ಬ ಪುತ್ರನನ್ನು ಪಡೆದು, ಆ ಮಾಂತ್ರಿಕನಿಗೆ ಹತ್ತೆಂಟು ಸಹಸ್ರ ರೂಪಾಯಿಗಳ ಮರ್ಯಾದೆ ಮಾಡಿದನು. ತರುವಾಯ ಕೆಲ ವರ್ಷಗಳಮೇಲೆ ಶ್ರೀಗಳವರು ಪುನಃ ಆ ಸ್ಥಳಕ್ಕೆ ಬಂದಾಗ್ಗೆ, ಆ ಸಾಹುಕಾರನು ಅವರ ದರ್ಶನಮಾಡದೆ ಅಲಕ್ಷ್ಯದಿಂದಿದ್ದನು. ಆ ಸಂಗತಿಯನ್ನು ಕೇಳಿದ ಶ್ರೀ ವಾದಿರಾಜರು ಅವನನ್ನೂ ಅವನ ಮಗನನ್ನೂ ಕರೆಯಿಸಿ, ಆ ತಂದೆತಾಯಿಗಳ ಸಮಕ್ಷಮದಲ್ಲೇ ಆ ಹುಡುಗನಮೇಲೆ ತೀರ್ಥವನ್ನು ಪ್ರೋಕ್ಷಿಸಲು, ಆ ಬಾಲಕನ ಸೌಮ್ಯರೂಪವು ಮಾಯವಾಗಿ ಅಲ್ಲೊಂದು ಘೋರ

---

*ಈ ಪದವು ಹರಿದಾಸ ಕೀರ್ತನ ತರಂಗಿಣಿ ೩ನೆಯ ವರ್ಷದ ೪ನೆಯ ಸಂಚಿಕೆಯಲ್ಲಿ ಪ್ರಕಟವಾಗಿದೆ.

ರೂಪವು ದೃಷ್ಟಿಗೋಚರವಾಯಿತು. ಅದೇನೆಂದು ಎಲ್ಲರೂ ಗಾಭರಿಗೊಂಡಿರಲು, ಶ್ರೀಗಳವರು ನೀನು ಯಾರೆಂದು ಅವನನ್ನು ಪ್ರಶ್ನಿಸಿದರು. ಆಗ ಆ ಭೂತವು-'ಸ್ವಾಮಿ ನಾನೊಬ್ಬ ಭೂತಗಣಕ್ಕೆ ಸೇರಿದವನು. ಈ ಮಾಂತ್ರಿಕನು ನನ್ನನ್ನು ವಶಪಡಿಸಿಕೊಂಡು, ಇವನಿಗೆ ಮಗನಾಗಿ ಹುಟ್ಟಿ ಆರು ವರ್ಷಗಳ ತರುವಾಯ ಈ ದಂಪತಿಗಳನ್ನು ಕೊಂದು ಹೊರಟು ಬರಬೇಕೆಂದು ನೇಮಿಸಿದ ಪ್ರಕಾರ ಇಲ್ಲಿಗೆ ಬಂದೆನು' ಎಂದು ನುಡಿದು ಕಾಪಾಡಬೇಕೆಂದು ಬೇಡಿಕೊಂಡನು. ಆ ಮಾತುಗಳನ್ನು ಕೇಳಿದ ಗೃಹಸ್ಥನೂ ಅವನ ಪತ್ನಿಯೂ ಗಡಗಡನೆ ನಡುಗತೊಡಗಿದರು. ಆಗ ಯತಿಗಳು ಅವನನ್ನು ಕುರಿತು - 'ನೋಡು, ನಮ್ಮ ಮಾತಿನಲ್ಲಿ ವಿಶ್ವಾಸವಿಲ್ಲದೆ, ದುಶ್ಶೀಲರ ಕುತಂತ್ರಗಳಿಗೆ ಒಳಪಟ್ಟು ಎಂತಹ ಪ್ರಾಣಾಪಾಯಗಳನ್ನು ಕಲ್ಪಿಸಿಕೊಂಡಿರುವೆ. ಇನ್ನು ಮುಂದಾದರೂ, ಈ ಬಗೆಯ ಭ್ರಾಂತಿಗಳನ್ನು ಬಿಟ್ಟು, ಹರಿ ಸೇವಾನಿರತನಾಗಿರು' ಎಂದು ಬುದ್ಧಿಹೇಳಿ ಆಶೀರ್ವದಿಸಿ, ಆ ಭೂತಕ್ಕೆ ಅವರಿಗೆ ಏನೂ ತೊಂದರೆ ಮಾಡಕೂಡದೆಂದು ಆಜ್ಞಾಪಿಸಿ, ತೀರ್ಥವನ್ನು ಪುನಃ ಪ್ರೋಕ್ಷಿಸಲು, ಆ ಘೋರರೂಪವು ಮಾಯವಾಗಿ ಎಂದಿನಂತೆ ಐದು ವರ್ಷಗಳ ಬಾಲಕನ ರೂಪವು ತೋರ್ಪಟ್ಟಿತು.

ಶ್ರೀ ವಾದಿರಾಜ ಸ್ವಾಮಿಗಳು ದೇಶಸಂಚಾರ ಮಾಡುತ್ತ ಶ್ರೀ ವೇಂಕಟಾಚಲಕ್ಕೆ ಬಂದರು. ಆ ಬೆಟ್ಟದ ಮೆಟ್ಟಿಲುಗಳನ್ನು ಹತ್ತತೊಡಗಿದಾಗ ಅಲ್ಲಿ ಅನೇಕ ಮಹರ್ಷಿಗಳು ಅದೃಶ್ಯರಾಗಿ ತಪಸ್ಸು ಮಾಡುತ್ತಿರುವುದನ್ನು ಕಂಡು, ಪಾದ ತಲವನ್ನು ಭೂಮಿಗೆ ಸೋಕಿಸಲು ಶಂಕಿಸಿ, ಮೊಣಕಾಲುಗಳನ್ನೂರಿಕೊಂಡೇ ನಡೆದು ಬೆಟ್ಟವನ್ನೇರಿ, ಶ್ರೀನಿವಾಸನ ದರ್ಶನ ಮಾಡಿ ಸಾಲಿಗ್ರಾಮ ಮಾಲಿಕೆಯನ್ನು ಶ್ರೀವರನ ಕಂಠಕ್ಕೆ ಸಮರ್ಪಿಸಿದರು. ಆ ಮಾಲಿಕೆಯು ಈಗಲೂ ಸ್ವಾಮಿಯ ದಿವ್ಯಕಂಠದಲ್ಲಿ ವಿರಾಜಮಾನವಾಗಿದೆ.

ಶ್ರೀಗಳವರು ಶ್ರೀ ವಿಠಲಸ್ವಾಮಿಯ ಸೇವೆಗಾಗಿ ಪಂಢರಪುರದಲ್ಲಿ ವಾಸಿಸುತ್ತಿದ್ದಾಗ ಒಂದು ದಿನ ಒಬ್ಬ ಧನಿಕನು, ಒಂದು ಬಿಳಿಯ ಕುದುರೆಯು ತನ್ನ ಕಡಲೆಯ ಹೊಲವನ್ನು ಪ್ರವೇಶಿಸಿ ಸ್ವೇಚ್ಛೆಯಾಗಿ ಮೇಯ್ದು

ತ್ತಿದ್ದುದನ್ನು ಕಂಡು ಅಟ್ಟಿಸಿಕೊಂಡು ಬಂದನು. ಕುದುರೆಯು ಓಡು ತ್ತೋಡುತ್ತಾ ಬಂದು ಶ್ರೀಗಳವರು ತಂಗಿದ್ದ ಬಿಡಾರದೊಳಕ್ಕೆ ನುಗ್ಗಿ ದಂತಾಯಿತು. ಆವನು ಸ್ವಾಮಿಗಳನ್ನು ಕಂಡು, ನಿಮ್ಮ ಬಿಳಿಯ ಕುದು ರೆಯು ನಮ್ಮ ಹೊಲವನ್ನೆಲ್ಲ ತುಳಿದು ತಿಂದು ಧ್ವಂಸಮಾಡಿತೆಂದು ಆಕ್ಷೇಪಿ ಸಲು, ಅವರು ನಮ್ಮಲ್ಲಿ ಕುದುರೆಯೇ ಇಲ್ಲವೆಂದು ಹೇಳಿದರು. ಆ ಧನಿಕನು ಬಿಡಾರದ ಎಲ್ಲಾ ಸ್ಥಳದಲ್ಲೂ ಹುಡುಕಿ ಕುದುರೆಯನ್ನು ಕಾಣದೆ, ಶ್ರೀಗಳವರಿ ಗೆ ವಂದಿಸಿ ಕ್ಷಮೆ ಬೇಡಿದನು. ಆಗ ಆ ದಯಾಮಯರು–'ಅಯ್ಯಾ ನಮ್ಮಲ್ಲಿ ಕುದುರೆಯಿಲ್ಲ. ಆದರೆ ನಮ್ಮ ಉಪಾಸ್ಯ ದೇವನಾದ ಶ್ರೀ ಹಯಗ್ರೀವನು ನಿನ್ನನ್ನು ಅನುಗ್ರಹಿಸಲೆಣಿಸಿ ಕುದುರೆಯ ರೂಪಿನಿಂದ ಬಂದು ನಿನ್ನ ಹೊಲ ವನ್ನು ಮೇಯ್ದಿರಬಹುದು. ಆದರೂ ನಾಳೆ ಬೆಳಗ್ಗೆ ನಿನ್ನ ಹೊಲವನ್ನು ನೋಡಿ, ಎಷ್ಟು ನಷ್ಟವಾಗಿದೆಯೆಂಬ ಬಗ್ಗೆ ನಮಗೆ ಬಂದು ತಿಳಿಸು' ಎಂ ದು ಹೇಳಿ ಕಳುಹಿಸಿದರು. ಮಾರನೆಯ ಪ್ರಾತಃಕಾಲ ಹೊಲವನ್ನು ಹೊಕ್ಕ ಆ ಸಾಹುಕಾರನು, ಎಲ್ಲೆಲ್ಲೂ ಚಿನ್ನದ ಕಡಲೆಯ ಗೊಂಚಲುಗಳೇ ಜೋಲು ತ್ತಿದ್ದುದನ್ನು ಕಂಡು ಪರಮಾಶ್ಚರ್ಯ ಭರಿತನಾಗಿ, ಸ್ವಾಮಿಗಳವರಲ್ಲಿಗೆ ಬಂದು ನಮಸ್ಕರಿಸಿ, ಆ ಹೊಲವನ್ನೇ ಸ್ವಾಮಿ ಸೇವೆಗಾಗಿ ದಾನವಾಗಿ ಕೊ ಟ್ಟುಬಿಟ್ಟನು. ಗುರುಗಳು ಅವನಿಗೆ ಸಕಲ ಶ್ರೇಯಸ್ಸೂ ಉಂಟಾಗಲೆಂದು ಆಶೀರ್ವದಿಸಿದರು.

ತೀರ್ಥಯಾತ್ರಾ ಕಾಲದಲ್ಲಿ ವಿಜಯ ನಗರವನ್ನು ಸಂದರ್ಶಿಸಿದ ಶ್ರೀ ವಾದಿರಾಜರು, ಅಲ್ಲಿಯ ಅರಸನಾಗಿದ್ದ ವೀರಪ್ರತಾಪ ಶ್ರೀ ವೇಂಕಟಪತಿ ರಾಜನ ಆಸ್ಥಾನದಲ್ಲಿದ್ದ ಸಕಲ ವಾದಿಗಳನ್ನೂ ಜಯಿಸಲು, ರಾಜನು, ಅವರಿಗೆ 'ಪ್ರಸಂಗಾಭರಣ ತೀರ್ಥರು' ಎಂಬ ಬಿರುದನ್ನು ಕೊಟ್ಟು, ಸಕಲವಿಧ ರಾಜ ಮರ್ಯಾದೆಗಳಿಂದಲೂ ಅರಮನೆಗೆ ಕರೆದೊಯ್ದು ಪಾದ ಪ್ರಕ್ಷಾಳನೆಮಾಡಿ ಭಕ್ತಿಯಿಂದ ಪೂಜಿಸಿದನು. ಮತ್ತೊಂದುವೇಳೆ ಮಾಘಕವಿಯ 'ಶಿಶು ಪಾಲವಧ' ಎಂಬ ಗ್ರಂಥವೇ ಸರ್ವೋತ್ಕೃಷ್ಟವಾದುದೆಂದು ಭಾವಿಸಿ ಅದನ್ನು ಆನೆಯ ಮೇಲಟ್ಟು ಮೆರವಣಿಗೆಮಾಡಿ ಗೌರವಿಸುತ್ತಿದ್ದ ಪೂನಾಪಟ್ಟಣದ ರಾಜನಿಗೆ, ಅದಕ್ಕಿಂತಲೂ ಉತ್ತಮವಾದ ಗ್ರಂಥವೊಂದಿದೆಯೆಂದು ನುಡಿದು ಶ್ರೀಗಳವರು ಇಪ್ಪತ್ತೇ ದಿವಸಗಳಲ್ಲಿ 'ಶ್ರೀ ರುಗ್ಮಿಣೀಶ ವಿಜಯ'ವೆಂಬೊಂದು

ಮಹಾ ಕಾವ್ಯವನ್ನೇ ರಚಿಸಿ ಪಂಡಿತ ಮಂಡಲಿಯನ್ನು ಬೆರಗುಗೊಳಿಸಿದರು.

ಹೀಗೆಯೇ ಅನೇಕ ಸ್ಥಳಗಳಲ್ಲಿ ತಮ್ಮ ಅಮಾನುಷ ಮಹಿಮೆಗಳನ್ನು ಪ್ರಕಟಿಸುತ್ತ ಪ್ರಯಾಗ ಕ್ಷೇತ್ರಕ್ಕೆ ಬಂದು, ಅಲ್ಲಿ ಒಂದು ದಿನ ಜಪವನ್ನಾಚರಿಸುತ್ತಿದ್ದಾಗ್ಗೆ ಶ್ರೀ ವೇದವ್ಯಾಸ ದೇವರು ತಪಸ್ವಿ ವೇಷದಿಂದ ಬಂದು, - 'ನಿಮ್ಮ ತಾಯಿಯು ತನಗೆ ಸಂತಾನವಾದರೆ ಲಕ್ಷಾಭರಣಗಳನ್ನು ಸಮರ್ಪಿಸುವೆನೆಂದು ಹರಕೆಸಿಕೊಂಡಿದ್ದಳು. ನೀವು ಮಹಾಭಾರತ ಗ್ರಂಥದಲ್ಲಿರುವ ಒಂದು ಲಕ್ಷ ಕಠಿಣ ಶಬ್ದಗಳಿಗೆ ಟೀಕೆ ಬರೆದು ಲಕ್ಷಾಭರಣಗಳನ್ನು ಸಮರ್ಪಿಸಿ, ನಿಮ್ಮ ತಾಯಿಯನ್ನು ಸತ್ಯಪ್ರತಿಜ್ಞಳನ್ನಾಗಿಮಾಡಿರಿ!' ಎಂದು ನುಡಿಯಲು, ಶ್ರೀ ವಾದಿರಾಜರು ಅದಕ್ಕೊಪ್ಪಿ, ಲಕ್ಷಾಲಂಕಾರ (ಲಾಕ್ಷಾಭರಣ) ವೆಂಬ ಹೆಸರಿನಿಂದ ಮಹಾಭಾರತ ಗ್ರಂಥಕ್ಕೆ ಟೀಕೆಯನ್ನು ರಚಿಸಿ ಭಗವತ್ಸಮರ್ಪಣೆ ಮಾಡಿದರು.

ಪಶ್ಚಾತ್ ಕಾಲದಲ್ಲಿ ಶ್ರೀಗಳವರಿಗೆ ಒಬ್ಬ ಬ್ರಹ್ಮರಾಕ್ಷಸನು ಗಂಟುಬಿದ್ದು ಶಾಸ್ತ್ರ ವಿಚಾರವಾಗಿ ವಾದಮಾಡಲಾರಂಭಿಸಿದನು. ಸ್ವಾಮಿಗಳವರಿಗಿದ್ದ ಸಕಲ ವಿದ್ಯಾ ಪಾಂಡಿತ್ಯವು ಅವನನ್ನು ಸಂತೋಷಪಡಿಸಲು-ಅವನು ನನ್ನ ಈ ರಾಕ್ಷಸ ಜನ್ಮವು ನಿವೃತ್ತವಾಗುವವರೆಗೂ ಸನ್ನಿಧಿಯಲ್ಲಿ ಸೇವೆ ಮಾಡಿಕೊಂಡಿರುತ್ತೇನೆ ಎಂದು ಹೇಳಿ ಹಾಗೆಯೇ ನಡೆದುಕೊಂಡಿದ್ದನು. ಶ್ರೀಗಳವರು ಪಲ್ಲಕ್ಕಿಯಲ್ಲಿ ಕುಳಿತು ಹೊರಟರೆಂದರೆ, ಪಾಲಕಿಯ ಹಿಂಭಾಗದ ಬೊಂಬನ್ನು ಮಾತ್ರ ಬೋಯಿಗಳು ಹೊತ್ತು ಬರುತ್ತಿರಲು, ಮುಂಭಾಗದ ಬೊಂಬನ್ನು ಈ ಭೂತರಾಜನು ಹೊತ್ತು ನಡೆಯುತ್ತಿದ್ದನು. ಆದರೆ, ಮುಂಭಾಗದಲ್ಲಿ ಯಾರೂ ಹೊತ್ತಂತೆ ಕಾಣದೆ ಬೊಂಬು ಅಂತರಾಳದಲ್ಲಿ ನಿಂತು ಸಾಗುತ್ತಿರುವಂತೆಯೇ ಎಲ್ಲರಿಗೂ ಕಾಣುತ್ತಿತ್ತು. ಇದನ್ನು ಕಂಡು ಶ್ರೀಗಳವರ ಮಹಿಮೆಗಾಗಿ ಸಕಲರೂ ಪರಮಾಶ್ಚರ್ಯ ಪಡುತ್ತಿದ್ದರು.

ಆನೇಗೊಂದಿ ಎಂಬೊಂದು ಊರಿನಲ್ಲಿ ಒಬ್ಬ ಮಂತ್ರಿಶ್ರೇಷ್ಠ....
ಅವನು ಪ್ರತಿದಿನವೂ ತನ್ನ ಸ್ನಾನಾದಿ ನಿತ್ಯ ಕೃತ್ಯಗಳನ್ನು ತೀರಿಸಿಕೊಂಡೊಡ

ನೆಯೇ ಮಂತ್ರಬಲದಿಂದ ಅಂತರಿಕ್ಷದಲ್ಲಿ ಬಹುದೂರಕ್ಕೆ ಹೋಗಿ ತರುವಾಯ
ಕೆಳಕ್ಕೆ ಬರುತ್ತಿದ್ದನು. ಈ ಅದ್ಭುತವನ್ನು ಕಂಡ ಜನರು ಅವನಲ್ಲಿ ಅತಿಶಯ
ಭಯಭಕ್ತಿಗಳನ್ನಿಟ್ಟು ನಡೆಯುತ್ತಿದ್ದರು. ತನ್ನ ಅಮಾನುಷ ಕಾರ್ಯಕ್ಕಾಗಿ
ಜನರು ತನ್ನಲ್ಲಿ ಭಯಭಕ್ತಿಗಳನ್ನಿಟ್ಟು ನಡೆಯುತ್ತಾರೆಂದು ತಿಳಿದೊಡನೆಯೇ
ಅವನಿಗೆ ಪ್ರತಿಷ್ಠೆಯುಂಟಾಗಿ ಜನಗಳನ್ನು ಮನಬಂದಂತೆ ಹಿಂಸಿಸಲಾರಂಭಿಸಿ
ದನು. ಇದನ್ನು ಸಹಿಸುವುದು ಬಹು ಅಸಾಧ್ಯವಾಗಿ ಆ ಪ್ರಾಂತದ ಜನರೆಲ್ಲ
ಅವನನ್ನು ನಿಗ್ರಹಿಸುವ ಮಾರ್ಗತಿಳಿಯದೆ ಸಂಕಟಪಡುತ್ತಿದ್ದರು. ಹೀಗಿರು
ವಲ್ಲಿ ಭೂತರಾಜನಿಂದ ಹೊರಲ್ಪಟ್ಟ ಪಾಲಕಿಯಲ್ಲಿ ಕುಳಿತು ತಮ್ಮ ಪ್ರಾಂತ
ದಲ್ಲಿ ಸಂಚಾರಮಾಡುತಿದ್ದ ಶ್ರೀಗಳವರನ್ನು ಕಂಡು, ಆ ಮಹಾಮಹಿಮರಿಂದ
ತಮ್ಮ ಸಂಕಟವು ನಿವಾರಣೆಯಾಗಬಹುದೆಂದು ನಂಬಿ, ಆ ಜನರು ಅವರ
ಮರೆಬಿದ್ದರು. ಸ್ವಾಮಿಗಳು, ಆ ದಿನ ಎಂದಿನಂತೆಯೇ ಅಂತರಿಕ್ಷಕ್ಕೆ ಏರು
ತ್ತಿದ್ದ ಅವನನ್ನು ನೆಲಕ್ಕೆ ಬೀಳಿಸುವಂತೆ ಭೂತರಾಜನಿಗೆ ಆಜ್ಞಾಪಿಸಿದರು.
ಮಂತ್ರಜ್ಞನು ಮೇಲಿನಿಂದ ದೊಪ್ಪೆಂದು ಭೂಮಿಗೆ ಬಿದ್ದು ಸಕಲರ ಅಪಹಾ
ಸ್ಯಕ್ಕೂ ಕಾರಣನಾದನು. ಒಡನೆ ಶ್ರೀಗಳವರೊಂದಿಗೆ ಶಾಸ್ತ್ರ ಜಿಜ್ಞಾ
ಸಕ್ಕೂ ಪ್ರಾರಂಭವಾಯಿತು. ಅದರಲ್ಲೂ ಶ್ರೀ ವಾದಿರಾಜರು ಅವನನ್ನು
ಸಂಪೂರ್ಣವಾಗಿ ಸೋಲಿಸಿ, ಅವನ ಬಿರುದು ಬಹುಮತಿಗಳನ್ನೆಲ್ಲ ಕಸಿದು
ಕೊಂಡು ದುರಹಂಕಾರಿಯಾದ ಅವನನ್ನು ಕಳುಹಿಸಿಬಿಟ್ಟರು. ಆ ಬಿರುದು
ಬಹುಮತಿಗಳು, ಬಸವನಗಂಟೆ ಮುಂತಾದುವುಗಳನ್ನು, ಶ್ರೀಗಳವರ ಆರಾ
ಧನೆಯ ದಿನ, ಸೋದೆಯಲ್ಲಿ ಸಕಲರಿಗೂ ತಿಳಿಯುವಂತೆ ಹೊರಗಿಟ್ಟು ಪ್ರ
ದರ್ಶಿಸುವ ಪದ್ಧತಿಯು ಈಗಲೂ ಉಂಟು.

'ಡಿಲ್ಲಿ ಪಾದಷಹನ ಮೃತಪುತ್ರನನ್ನು ಬದುಕಿಸಿದುದು' 'ಹಾವಿನ
ಭಯದಿಂದ ತಮ್ಮ ಪೀಠದ ಕೆಳಕ್ಕೆ ಬಂದು ಮರೆಹೊಕ್ಕ ಇಲಿಯನ್ನು ರಕ್ಷಿ
ಸಿ ಹಾವು ಇಲಿಗಳೆರಡೂ ಸ್ನೇಹದಿಂದ ತಮ್ಮ ದಂಡದಲ್ಲೇ ವಾಸಿಸಿರು
ವಂತೆ ನಿಯಮಿಸಿದುದು,' 'ತಮ್ಮ ಚತುಷ್ಷಷ್ಠಿ ಕಲಾಭಿಜ್ಞತೆಯನ್ನು ಪರೀಕ್ಷಿ
ಸಲು ಬಂದ ಚಮ್ಮಾರನಿಗೆ, ಆ ವಿದ್ಯೆಯಲ್ಲೂ ತಮಗಿದ್ದ ಪಾಂಡಿತ್ಯವನ್ನು
ತೋರಿಸಿದುದು,' 'ಜ್ವರಾಭಿಮಾನಿ ದೇವತೆಗೆ ಗೊತ್ತಾದ ಒಂದುಸಮಯದಲ್ಲಿ
ತಮ್ಮ ದಂಡದಲ್ಲಿ ಬಂದು ಪ್ರವೇಶಿಸುವಂತೆ ನಿಯಮಿಸಿದುದು' ಮುಂತಾದ

ಅನೇಕಾನೇಕ ಅದ್ಭುತ ಮಹಿಮೆಗಳನ್ನು ಪ್ರಕಟಿಸಿ ಶ್ರೀ ವಾದಿರಾಜರು ಶಿಷ್ಯವರ್ಗದ ಭಕ್ತಿ ಗೌರವಗಳಿಗೆ ಪಾತ್ರರಾದರು.

ಸಂದರ್ಭಾನುಸಾರ ಪ್ರಕಟಿಸಬೇಕಾಗಿ ಬಂದ ಮೇಲ್ಕಂಡ ಮಹಿಮೆಗಳ ಮೂಲಕ ಆ ಮಹಾಪುರುಷರ ಪ್ರತಿಭೆಯನ್ನು ಕಂಡುಹಿಡಿಯುವುದಕ್ಕಿಂತಲೂ ಅವರು ರಚಿಸಿದ ಗ್ರಂಥರಾಸಿಯಿಂದ ಅವರ ಮಹಿಮೆಯು ಹೆಚ್ಚು ಪ್ರಕಾಶಿತವಾಗಿದೆ. ಶ್ರೀ ಸರ್ವಜ್ಞಾಚಾರ್ಯ ಕೃತ ಗ್ರಂಥರತ್ನಗಳ ನಿಜವಾದ ಅರ್ಥಬೋಧವಾಗಬೇಕಾಗಿದ್ದರೆ, ಶ್ರೀ ವಾದಿರಾಜರು ರಚಿಸಿದ ಟೀಕು ಟಿಪ್ಪಣಿಗಳ ಸಹಾಯ ಹೊಂದದಿದ್ದರೆ ಬೇರೆ ಮಾರ್ಗವೇ ಇಲ್ಲ. ಶ್ರೀಗಳವರ ಯುಕ್ತಿ ಚಮತ್ಕಾರಗಳನ್ನು ತಿಳಿಯಬೇಕಾಗಿದ್ದರೆ ಅವರ ಯುಕ್ತಿಮಲ್ಲಿಕಾ, ಉಪನ್ಯಾಸ ರತ್ನಮಾಲಾ ಎಂಬ ಗ್ರಂಥರತ್ನಗಳನ್ನೂ, ಸರಸವಾಕ್ಯ ರಚನಾ ಚಾತುರ್ಯವನ್ನು ತಿಳಿಯಲು ಶ್ರೀ ರುಗ್ಮಿಣೀಶ ವಿಜಯ, ಸರಸ ಭಾರತೀ ವಿಲಾಸ ಎಂಬ ಗ್ರಂಥಗಳನ್ನೂ ಅವಲೋಕಿಸಬೇಕು.

ಈ ಮಹನೀಯರು ಸಂಸ್ಕೃತದಲ್ಲಿ ಅನೇಕ ಗ್ರಂಥಗಳನ್ನು ರಚಿಸಿದರೆಂದು ತಿಳಿಯಬರುತ್ತದೆ. ಅವುಗಳಲ್ಲಿ, ಶ್ರೀ ಗುರು ರಾಜೀಯ ಸುಧಾ ಟಿಪ್ಪಣಿ, ತತ್ವಪ್ರಕಾಶಿಕಾ ಟಿಪ್ಪಣಿ, ಭಗವದ್ಗೀತಾ ಟಿಪ್ಪಣಿ, ಮಹಾಭಾರತ ಟಿಪ್ಪಣಿ, ಮಹಾಭಾರತ ತಾತ್ಪರ್ಯ ನಿರ್ಣಯ ಟೀಕಾ, ತಂತ್ರಸಾರ ಟೀಕಾ, ಗುರ್ವರ್ಥ ದೀಪಿಕಾ, ಪ್ರಮೇಯ ಸಂಗ್ರಹ, ಯುಕ್ತಿಮಲ್ಲಿಕಾ, ರುಗ್ಮಿಣೀಶವಿಜಯ, ಸರಸ ಭಾರತೀ ವಿಲಾಸ, ತೀರ್ಥಪ್ರಬಂಧ, ಪಾಷಂಡ ಮತ ಖಂಡನ, ಏಕಾದಶೀ ನಿರ್ಣಯ, ಸಂಕಲ್ಪ ಪದ್ಧತಿ, ರೌಪ್ಯಪೀಠ ಶ್ರೀಕೃಷ್ಣ ಸ್ತುತಿಯೇ ಮುಂತಾದ ಐವತ್ತು ಸ್ತೋತ್ರಗಳು, ಭೂಗೋಳ ಮತ್ತು ಉಪನ್ಯಾಸ ರತ್ನಮಾಲಾ ಇವುಗಳನ್ನೂ, ಅಲ್ಲದೆ ಕನ್ನಡದಲ್ಲಿ ಮಹಾಭಾರತ ತಾತ್ಪರ್ಯ ನಿರ್ಣಯ, ವೈಕುಂಠ ವರ್ಣನೆ ಗುಂಡ ಕ್ರಿಯೆಗಳು, ಸುಳಾದಿಗಳು, ಸಾವಿರಾರು ಕೀರ್ತನೆಗಳು, ಸ್ವಪ್ನ ಗದ್ಯ, ಭ್ರಮರಗೀತೆ ಮುಂತಾದ ಲಕ್ಷಾವಧಿ ಗ್ರಂಥರಚನೆಯಿಂದ ಅಜರಾಮರವಾದ ಯಶಸ್ಸಿಗೆ ಭಾಗಿಗಳಾದರು. ಅಲ್ಲದೆ ಈ ಮಹನೀಯರು,

ಹೊಲೆಯರ ಉಪಯೋಗಕ್ಕಾಗಿ, ತುಳುಭಾಷೆಯಲ್ಲಿ ದಶಾವತಾರವನ್ನು ವರ್ಣಿಸುವ ಒಂದು ಪದವನ್ನು ರಚಿಸಿ ಕೊಟ್ಟರೆಂದೂ ಪ್ರಕಟವಾಗಿದೆ.

ಮೇಲೆ ಉದಾಹೃತನಾದ ಮಂತ್ರವಾದಿಯು ಶಿರ್ಶಿ ತಾಲ್ಲೂಕಿನ ಬಳಿ ಇದ್ದ ಸೋದಾ ಎಂಬ ರಾಜನಿಗೆ ರಾಜ ಗುರುವಾಗಿ ಅವನನ್ನು ತನ್ನ ಪ್ರಾಬಲ್ಯ ಮಂತ್ರಬಲಗಳಿಂದ ಪೀಡಿಸುತ್ತಿದ್ದನು. ಕೊನೆಗೆ ರಾಜನು ಶ್ರೀಗಳವರ ಮರೆಹೊಕ್ಕು ಅವನನ್ನು ಭಂಗಪಡಿಸಿ ಓಡಿಸಿದ ತರುವಾಯ, ತನ್ನ ರಾಜ್ಯದಲ್ಲಿ ವಾಸಮಾಡಲು ಬೇಕಾದ ಅನುಕೂಲತೆಗಳನ್ನೆಲ್ಲ ಕಲ್ಪಿಸಿ ಕೊಟ್ಟನು. ಶ್ರೀಗಳವರು ದಿವ್ಯ ದೇವಾಲಯಗಳನ್ನು ನಿರ್ಮಿಸಿ, ಅವುಗಳಲ್ಲಿ ಶ್ರೀ ತ್ರಿವಿಕ್ರಮ ದೇವರನ್ನೂ ಶ್ರೀ ಲಕ್ಷ್ಮೀ ದೇವಿಯನ್ನೂ ಪ್ರತಿಷ್ಠೆ ಮಾಡಿ, ಆ ದೇವಸ್ಥಾನದ ಬಳಿ, ಆಕಾಶಗಂಗಾ, ಅಂತರಗಂಗಾ, ಅಮೃತಗಂಗಾ, ಪಾತಾಳಗಂಗಾ, ಧವಳಗಂಗಾ ಎಂಬ ಪಂಚಗಂಗಾ ತೀರ್ಥಗಳನ್ನೂ ನಿರ್ಮಿಸಿದರು.

ಶ್ರೀಮದ್ವಾದಿರಾಜ ಯತಿವರೇಣ್ಯರು ಮಾನುಷ ಆಯುರ್ಮಾನವಾದ ಸಂಪೂರ್ಣ ನೂರಿಪ್ಪತ್ತು ವರ್ಷಕಾಲ ಭೂಮಿಯಮೇಲೆ ವಾಸಿಸಿ ಶ್ರೀಹರಿ ಮಹಿಮೆಯನ್ನು ಸಹಸ್ರಾರು ಮುಖಗಳಿಂದ ಪ್ರಕಾಶಗೊಳಿಸಿದರು. ತರುವಾಯ, ಶಾ. ಶ. ೧೫೨೨ನೆಯ ಶಾರ್ವರಿ ಸಂ|| ಫಾಲ್ಗುಣ ಕೃಷ್ಣ ತೃತೀಯಾ ಬುಧವಾರದ ದಿನ ಶ್ರೀಗಳವರು ಭೌತಿಕ ಕಳೇಬರವನ್ನು ವೃಂದಾವನ ಪ್ರವೇಶಗೊಳಿಸಲು ಇಷ್ಟಪಟ್ಟಿದ್ದಾರೆಂಬ ವಾರ್ತೆಯು ಎಲ್ಲೆಲ್ಲೂ ಹಬ್ಬಿತು. ಸಾವಿರಾರುಮಂದಿ ಭಕ್ತಾದಿಗಳು ನೆರೆದರು. ಶ್ರೀಗಳವರ ಪ್ರವೇಶಕ್ಕಾಗಿ ವೃಂದಾವನವು ಮೊದಲೇ ಸಿದ್ಧವಾಗಿತ್ತು. ಶ್ರೀ ವಾದಿರಾಜರು ಶ್ರೀ ತ್ರಿವಿಕ್ರಮ ಸ್ವಾಮಿ-ಲಕ್ಷ್ಮೀದೇವಿಯರನ್ನು ಕೊನೆಯ ಬಾರಿ ಮನಸಾರೆ ಪೂಜಿಸಿ, ನೆರೆದ ಸಮಸ್ತರಿಗೂ ಮಂತ್ರಾಕ್ಷತೆಯನ್ನು ಅನುಗ್ರಹಿಸಿ,—'ವೃಂದಾವನದ ಒಳಗೆ ನಾನು ಕುಳಿತು ಜಪಿಸುತ್ತಿರುವೆನು. ಕೈಯೊಳಗಿನ ಜಪಸರವು ಕೆಳಕ್ಕೆ ಬಿದ್ದೊಡನೆಯೇ ಮುಂಭಾಗಕ್ಕೆ ಕಲ್ಲು ಮುಚ್ಚಳವನ್ನು ಮುಚ್ಚಿಬಿಡಿರಿ' ಎಂದು ಶಿಷ್ಯವೃಂದಕ್ಕೆ ಆಜ್ಞಾಪಿಸಿ ವೃಂದಾವನ ಪ್ರವೇಶ ಮಾಡಿದರು. ತರುವಾಯ ಸ್ವಲ್ಪ ಹೊತ್ತಿಗೆಲ್ಲಾ ಧ್ಯಾನ

ತತ್ಪರರಾದ ಆ ಮಹಾಮಹಿಮರ ಪವಿತ್ರ ಚೇತನವು ಭೌತಿಕ ಕಳೇಬರವನ್ನು ತ್ಯಜಿಸಿತೆಂಬುದಕ್ಕೆ ನಿದರ್ಶನವಾಗಿ ಜಪಸರವು ಕೆಳಕ್ಕೆ ಬಿದ್ದಿತು. ತರುವಾಯ ಅವರ ಆಜ್ಞೆಯಂತೆ, ವೃಂದಾವನದ ಮುಂಭಾಗಕ್ಕೆ ಕಲ್ಲು ಮುಚ್ಚಳವನ್ನು ಮುಚ್ಚಿದರು.

ಒಡನೆ ಅಂತರಿಕ್ಷದಲ್ಲಿ ಚಿಕ್ಕ ಚಿಕ್ಕ ವಿಮಾನ ಗಂಟೆಗಳ ಶಬ್ದವಾಗಲು ಸರ್ವರೂ ಮೇಲೆ ನೋಡಿ ಗುರುವರರ ಪ್ರಭಾವವನ್ನು ಸಹಸ್ರ ಮುಖಗಳಿಂದ ಹೊಗಳಿದರು. ಶ್ರೀಗಳವರು, ತಮ್ಮ ಸ್ವರ್ಣ ಪಾದುಕಾ ಮತ್ತು ಕಾವಿಶಾಟಿಗಳನ್ನು ಕೆಳಕ್ಕೆ ಹಾಕಿ, 'ಈ ವೃಂದಾವನದಲ್ಲಿ ಒಂದಂಶದಿಂದ ನೆಲೆಗೊಂಡು ಭಕ್ತಾದಿಗಳ ಸರ್ವಾಭೀಷ್ಟಗಳನ್ನೂ ಸಲ್ಲಿಸುತ್ತಿರುವೆ'ವೆಂದು ಅಭಯಪ್ರದಾನ ಮಾಡಿದರು.

ಹೀಗೆ ಭಾವೀ ಸಮೀರಜರೆಂದು ಪ್ರಖ್ಯಾತರಾದ ಶ್ರೀಮದ್ವಾದಿರಾಜ ಯತಿವರೇಣ್ಯರು ಅವತರಿಸಿ ಮಹತ್ಕಾರ್ಯಗಳನ್ನು ಮಾಡಿ ಧರ್ಮೋದ್ಧಾರ ಮಾಡಿದ ಪುಣ್ಯ ಚರಿತ್ರೆಯೂ, ಅವರಿಂದ ವಿರಚಿತಗಳಾದ ಅಸಂಖ್ಯ ಗ್ರಂಥಗಳೂ ಸರ್ವರಿಗೂ ಆಸ್ತಿಕತೆ ಧರ್ಮಾಭಿಮಾನ ಭಕ್ತಿಜ್ಞಾನ ವೈರಾಗ್ಯಾದಿಗಳು ಮುಂತಾದ ಸರ್ವ ಸಂಪತ್ತುಗಳನ್ನೂ ದಯಪಾಲಿಸಲಿ.

ಬೆಂಗಳೂರು<br>ತಾ|| ೧೬-೯-೩೯.

ಇತಿ ಸುಜನ ವಿಧೇಯ,<br>**ಯಂ. ರಾಮರಾವ್.**



ಸುಬೋಧ ಮುದ್ರಣಾಲಯ, ಬೆಂಗಳೂರು ನಗರ.—೧೯೩೯.—

ॐ ಶ್ರೀರಾಮ ಸಹಾಯಂ ॐ

# ಶ್ರೀ

# ಕರ್ಣಾಟಕ ಹರಿದಾಸ ಕೀರ್ತನ ತರಂಗಿಣಿ

## ಶ್ರೀ ಪಾಂಡುರಂಗ ವಿಠಲಾಯನಮಃ



### ೧ ರಾಗ ಮೋಹನ ಅಟತಾಳ

ಧವಳ ಗಂಗೆಯ ಗಂಗಾಧರ ಮಹಲಿಂಗ ಪ

ಮಾಧವನ ತೋರಿಸೈಯ ಗುರುಕುಲೋತ್ತುಂಗ ಅ

ಅರ್ಚಿಸಿದವರಿಗಭೀಷ್ಟೆಯ ಕೊಡುವ
ದುಶ್ಚರಿತರನೆಲ್ಲ ದೂರದಲ್ಲಿಡುವ
ಹೆಚ್ಚಿದ ಅಘಗಳ ಬೇಗನೆ ತರಿವ, ನ
ಮ್ಮಚ್ಯುತಗಲ್ಲದ ಅಸುರರ ಬಡಿವ ೧

ಮಾರನ್ನ ಗೆಲಿದ ಮನೋಹರ ಮೂರ್ತಿ
ಸಾರಸಜ್ಜನರಿಗೆ ಸುರಚಕ್ರವರ್ತಿ
ಧಾರುಣಿಯೆಲ್ಲ ತುಂಬಿತು ನಿನ್ನ ಕೀರ್ತಿ, ಮು
ರಾರಿಯ ತೋರಿಸೊ ನಿನಗೆ ಶರಣಾರ್ತಿ ೨

ಚೆನ್ನ ಪ್ರಸನ್ನ ಶ್ರೀ ಹಯವದನನ್ನ
ಅನುದಿನ ನೆನೆವಂತೆ ಮಾಡೊ ನೀನೆನ್ನ
ಅನ್ಯರನರಿಯೆನೊ ಗುರುವೆಂಬೆ ನಿನ್ನ
ಇನ್ನಾದರು ಹರಿಯ ತೋರೆಲೊ ಮುಕ್ಕಣ್ಣ ೩

೨ ರಾಗ ಆರಭಿ ಆದಿತಾಳ

ವಾಣೀ ಪರಮಕಲ್ಯಾಣಿ ನಮೋನಮೋ, ಅಜನ
ರಾಣಿ ಪಂಕಜಪಾಣಿ ಪ

ಭಳಿರೆ ಭಳಿರೆ ಎಂಬೆ ಭಕ್ತಜನ ಸುಖದಾಂಬೆ
ಸುಳಿದಾಡು ಶುಭನಿತಂಬೆ ಅಂಬೆ ೧

ಅಮ್ಮ ಹೊಳೆಹೊಳೆವೊ ಮುಖಮುಕುರ ಬಿಂಬೆ
ಇಳೆಯೊಳಗೆ ಸರಿಗಾಣೆ ಶಾರದಾಂಬೆ ಪುತ್ಥಳಿಯ ಬೊಂಬೆ ೨

ಶರಣು ಶರಣೆಲೆ ದೇವಿ ಸ್ಮರಣೆ ಮಾತ್ರದಿ ಕಾಯ್ವ
ಚರಣದಂದಿಗೆ ಠೀವಿ ಮೆರೆವೆ ವಾಗ್ದೇವಿ ೩

ನಲಿನಲಿವಾಭರಣಗಳ ಧರಿಸಿ ನಟಿಸುವಿ ದೇವಿ
ಇಳೆಯೊಳಗೆ ಹರಿಣಾಕ್ಷಿ ಸಲಹು ಕಾಮಾಕ್ಷಿ ೪

ಜಯಜಯತು ಜಗನ್ಮಾತೆ ಜಗದೊಳಗೆ ಪ್ರಖ್ಯಾತೆ
ದಯಮಾಡು ಧವಳಗೀತೈ ಮಾತೆ ೫

ನಿನ್ನಿಂದ ವಿದ್ಯೆ ಬುದ್ಧಿ ಹರಿಯೊಲುಮೆಯಮ್ಮ
ನಿನ್ನ ನಂಬಿದೆ ತಾಯೆ ನೀಬಂದು ಕಾಯೆ ೬

ಸತತ ಶ್ರೀ ಹಯವದನ ಪದಸೇವಕ ಪ್ರೀತೆ
ಕ್ಷಿತಿಯೊಳಗೆ ನಯದಿಂದ ಗೆಲಿಸೆನ್ನ ಮಾತೆ-ವಿಧಿಜಾತೆ ೭

೩ ರಾಗ ನಾಟಿ ಅಟತಾಳ

ಅಹುದಹುದು ಹನುಮಂತ ಅಹುದು ನೀ ಬಲವಂತ
ಅಹುದು ಮುಖ್ಯಪ್ರಾಣ ಮೂಲಗುರು ಅಹುದು ಪ

ಅಂಜನೆಯ ಗರ್ಭದಲಿ ಅಂದು ಜನಿಸಿದೆ ನೀನು
ಸಂಜೀವನವ ತಂದೆ ಸಕಲ ಕಪಿಗಳಿಗೆ
ಅಂಜದಲೆ ನೀಪೋಗಿ ಶರಧಿಯನೆ ನೆರೆದಾಟಿ
ಕಂಜಾಯತಾಕ್ಷಿಗುಂಗುರವಿತ್ತೆ ಹನುಮ ೧

ಕುಂತಿಯ ಗರ್ಭದಲಿ ಉದ್ಭವಿಸಿದೆಯೊ ನೀನು
ಪಂಥಗಳನಾಡಿ ದಾಯಾದ್ಯರೊಡನೆ
ಕಂತುಪಿತನನು ಸೇರಿ ಕೌರವರ ಬಲಸವರಿ
ಸಂತೋಷದಲಿ ಸಾಮ್ರಾಜ್ಯ ಕೈಕೊಂಡೆ ಭೀಮ ೨

ಮಧ್ವಾವತಾರದಲಿ ಮುನಿವೇಷವನು ತಾಳಿ
ಅದ್ವೈತವೆಂಬ ಅರಣ್ಯವನು ಗೆಲಿದೆ
ಮಧ್ವಶಾಸ್ತ್ರವ ಮಾಡಿ ಮತವನುದ್ಧರಿಸಿದೆ
ಮುದ್ದು ಹಯವದನನ ದಾಸ ನಿರ್ದೋಷ ೩

೪ ರಾಗ ಕಾಂಬೋದಿ ಝಂಪೆತಾಳ

ಈತನೇ ಲೋಕಗುರು ವೇದವಿಖ್ಯಾತ ಪ

ಭೂತಳದೊಳು ರಾಮದೂತನೆಂಬಾತ ಅ

ಅಂದು ಹನುಮಂತನಾಗ್ಯಖಿಳ ದಿಕ್ಕೆಲ್ಲವನು
ಒಂದು ನಿಮಿಷಕೆ ಪೋಗಿ ಉದಧಿ ಲಂಘಿಸುತ
ಇಂದೀವರಾಕ್ಷಿಗೊಂದಿಸಿ ಮುದ್ರಿಕೆಯನಿತ್ತು
ಬಂದು ರಾಮನಪಾದಕೆರಗಿ ನಿಂತಾತ ೧

ಅರ್ಜುನಗೆ ಅಣ್ಣನಾಗಿ ಅಂದು ದುರ್ಯೋಧನನ
ಲಜ್ಜೆಯನೆ ಕೆಡಿಸಿ ಬಹು ಖಳರ ಮುರಿದು
ಮೂಜ್ಜಗವಾಳುವ ಮಗಧಾಧಿಪನ ಸೀಳ್ದ
ಸಜ್ಜನಪ್ರಿಯ ಭೀಮಸೇನನೆಂಬಾತ ೨

ಮೂರಾರು ಎರಡೊಂದು ಮೂಢಮತಗಳ ಜರಿದು
ಸಾರಶಾಸ್ತ್ರಗಳ ಸಜ್ಜನರಿಗೊರೆದು
ವಾರಿಜನಾಭ ಶ್ರೀ ಹಯವದನ ರಾಯನಿಗೆ
ಯಾರೂ ಸರಿಯಿಲ್ಲೆಂದು ಸ್ಥಾಪಿಸಿ ಮೆರೆದಾತ ೩

೫ ರಾಗ ನಾಟಿ ಝಂಪೆತಾಳ

ಜಯ ಜಯತು ಶುಭಕಾಯ ಜಯ ಜಯತು ಹರಿಪ್ರಿಯ
ಜಯ ಜಯತು ಜೀಯ ಮಧ್ವಾಖ್ಯ ಮುನಿರಾಯಾ ಪ

ರಾಮಾವತಾರದಲಿ ಹನುಮಂತನಾಗಿ ನೀ
ತಾಮಸನ ಪುರವನಲಗಾಹುತಿಯನಿತ್ತೆ
ಭೂಮಿಜೆಯ ಕುಶಲವನು ರಘುನಾಥಗರುಹಿದೆ
ಸ್ವಾಮಿಕಾರ್ಯವ ವಹಿಸಿ ಖಳರ ನೀ ತರಿದೆ ೧

ದ್ವಾಪರಾಂತ್ಯದಲಿ ಶ್ರೀ ಕೃಷ್ಣನಂಘ್ರಿಯ ಭಜಿಸಿ
ಪಾಪಿ ಮಾಗಧ ಬಕ ಕೀಚಕಾದಿಗಳ
ಕೋಪದಿಂದಲಿ ತರಿದು ಕುರುಕುಲವ ಸವರಿ ಪ್ರ
ತಾಪದಿಂದಲಿ ಮೆರೆದೆ ಖಳರ ನೀ ಮುಂದೆ ೨

ಮಾಯಿಗಳು ಹೆಚ್ಚಿ ಮತವೆಲ್ಲ ಸಂಕರವಾಗೆ
ತಾಯಿಯಿಲ್ಲದ ಶಿಶುಗಳಂತೆ ಸುಜನರಿರಲು
ನೀಯವತರಿಸಿ ಮತವೆಲ್ಲ ಉದ್ಧರಿಸಿ ನಾ
ರಾಯಣನೆ ಮೂಜಗಕೆ ಪರದೈವವೆಂದೊರೆದೆ ೩

ದುರುಳವಾದಿಗಳಿಗುತ್ತರವ ಕೊಡಬೇಕೆನುತ
ಸರ್ವಶಾಸ್ತ್ರಾಮೃತವ ಸೃಜಿಸಿ ವಾಕ್ಯಗಳ
ದರುಶನ ಗ್ರಂಥಗಳ ಒಲಿದು ಶಿಷ್ಯರಿಗಿತ್ತೆ
ಪರಮ ತತ್ವದ ಖಣಿಯೆ ಗುರುಶಿರೋಮಣಿಯೆ ೪

ನಿನ್ನ ಮತವೇ ವೇದಶಾಸ್ತ್ರಗಳ ಸಮ್ಮತವು
ನಿನ್ನ ಮತವೇ ಇಹ ಪರಂಗಳಿಗೆ ಸಾಧನವು
ಪನ್ನಂಗ ಶಯನ ಶ್ರೀ ಹಯವದನ ದಾಸರೊಳು
ನಿನ್ನ ಪೋಲುವರುಂಟೆ ಮಧ್ವಮುನಿರಾಯ ೫

೬ ರಾಗ ಶ್ರೀರಾಗ ಆದಿತಾಳ

ನಮಸ್ತೇ ವಿಮಲ ಕೋಮಲೆ ರಮಾದೇವಿ
ನಮಸ್ತೇ ನಮಸ್ತೇ ಪ

ತರುಣಿ ಶಿರೋಮಣಿ ನಿನ್ನ ಶೀಲ ಸೌಂದರ್ಯವನು
ಧರೆಯೊಳಗೆ ವರ್ಣಿಸುವ ಕವಿಯದಾವ
ಸ್ಮರಮಣನೆಂದೆನಿಪ ರಮಣನುರದೊಳೆಂದೆಂದು
ಅರಮನೆಯ ಮಾಡಿ ಮೆರೆವೆ ಭಾಸ್ವರೆ ದೇವಿ ೧

ತನ್ನ ವೀರ್ಯದಿಂದ ಮಕ್ಕಳ ಸೃಜಿಸಿ ಯುಗಯುಗದಿ
ನಿನ್ನ ತಾರುಣ್ಯ ಲಾವಣ್ಯಗಳನು
ಮನ್ನಿಸಿ ಪೊರೆವ ಹರಿಯ ಪಟ್ಟದ ರಮಣಿ ಜಗ
ನ್ಮಾನ್ಯೆ ಚೈತನ್ಯೆ ಬಹು ಗುಣಗಣಸದನೆ ೨

ನಿನ್ನಂಗವಪ್ಪಲು ನೋಡಲು ಮುಖವ ಚುಂಬಿಸಲು
ಅನಂತಕರ ನೇತ್ರ ವಕ್ತ್ರಗಳನು
ಪೂರ್ಣ ಹಯವದನ ಕೈಕೊಂಡ ನಿನ್ನಯ ಗಂಡ
ಸ್ವರ್ಣಸಮವರ್ಣೆ ಕರ್ಣಾಯತಾಕ್ಷಿ ದೇವಿ ೩

೭ ರಾಗ ಆಸಾವೇರಿ ಅಟತಾಳ

ಮಧ್ವಾಂತರ್ಗತ ವೇದವ್ಯಾಸ ಕಾಯೊ
ಶುದ್ಧ ಮೂರುತಿಯೆ ಸರ್ವೇಶ ಪ

ಶುದ್ಧ ಮನದಲಿ ನಿನ್ನ ಭಜಿಸುವ ಭಕ್ತರಿಗೆ
ಬುದ್ಧ್ಯಾದಿಗಳ ಕೊಟ್ಟು ಸಲಹೊ ದೇವರದೇವ ಅ

ದ್ವಾಪರದಲಿ ಒಬ್ಬ ಮುನಿಪ, ತನ್ನ
ಕೋಪದಿಂದಲಿ ಕೊಡಲು ಶಾಪ
ಸ್ಥಾಪಿಸಲು ಜ್ಞಾನಲೋಪ
ಅ-ಪಾರ ತತ್ವ ಸ್ವರೂಪ

ಶ್ರೀಪತಿಗೆ ಪೊರೆಯೆಂದು ಮೊರೆಯಿಡೆ
ಪಾಪವಿರಹಿತಳಾದ ಯಮುನೆಯು
ದ್ವೀಪದಲೆ ಅಂಬಿಗರ ಹೆಣ್ಣಿನ
ರೂಪಿಗೊಲಿದವನಲ್ಲಿ ಜನಿಸಿದೆ ೧

ವೇದ ವಾದಿಗಳೆಲ್ಲ ಕೆಡಲು, ತತ್ವ
ವಾದಿ ಜನರು ಬಾಯಿಬಿಡಲು
ಮೇದಿನಿ ಸುರರು ಕಂಗೆಡಲು, ನಾನಾ
ವೇದವಿಭಾಗ ರಚಿಸಲು

ಮೋದದಿಂದ ತದರ್ಥ ಬೋಧಕ
ವಾದ ಶಾಸ್ತ್ರ ಪುರಾಣ ರಚಿಸಿ ವಿ
ವಾದಗಳ ನಿರ್ವಾದ ಮಾಡಿದ
ಸಾಧುವಂದಿತ ಬಾದರಾಯಣ ೨

ಸುಮತಿಗಳಿಗೆ ಬೋಧಿಸಿದೆ ವಿಶ್ವ
ಕುಮತಿಗಳಿಗೆ ಭೇದಿಸಿದೆ
ಕ್ರಮದಿಂದ ರಾಜ್ಯವಾಳಿಸಿದೆ ಜಗ
ತ್ಸ್ವಾಮಿ ನೀನೆಂದು ತೋರಿಸಿದೆ

ವಿಮಲ ರೂಪನೆ ಕಮಲನಾಭನೆ
ರಮೆಯ ಅರಸನೆ ರಮ್ಯ ಚರಿತನೆ
ಸುಮತೆಯಲಿ ಕೊಡು ಕಾಮಿತಾರ್ಥವ
ನಮಿಸುವೆನು ಹಯವದನ ಮೂರುತಿ ೩

## ೮ ರಾಗ ಆನಂದಭೈರವಿ ಆದಿತಾಳ

ತೋರೈಯ್ಯ ಯದುಕುಲ ತಿಲಕ
ತೋರೈಯ ನಿನ್ನ ಮುದ್ದು ಮುಖವ
ಓರಂತೆ ಪುದ್ದಿಸಿ ಯಶೋದೆ ಕು
ಮಾರನೆ ಬಾರೆಂದಳೈ ಪ

ಅಂದವಾದ ನಿನ್ನ ಮುದ್ದು ಮುಖದ
ಚಂದವನ್ನು ತಾ ನೋಡಿ
ಕಂದಿಕುಂದಿ ಇಂದಿರೆಯು ಮರುಳಾಗಿ
ಕಂದ ನಿನ್ನ ಹೊಂದೇ ನೆಂದಳೈ ೧

ಕೃಷ್ಣ ನಿನ್ನ ಮಕ್ಕಳಾಟಿಕೆ
ತಿಷ್ಟರಿಗೆ ಮೋಹವಾದುದು
ದುಷ್ಟ ಮತ ಮತಂಗಕ್ಕೆ
ಅಟ್ಟುವ ಸಿಂಹದ ಮರಿಯೆ ೨

ಇಂಥ ಹಯವದನನ
ಇಂಥ ದೇವರ ನಾ ಕಾಣೆ
ಪಂಥವೇನೊ ಎನ್ನ ಕೂಡೆ ದಿನಮಣಿ
ಕಿಂಕಿಣಿಯು ಬಾರೆಂದಳೈ ೩

೯ ರಾಗ ಮಧ್ಯಮಾವತಿ ಆದಿತಾಳ

ಬೇಗ ಬಾರೊ ಬೇಗ ಬಾರೊ ನೀಲಮೇಘವರ್ಣ
ನೀ ಮುದ್ದುಮುಖದ ರನ್ನ ನೀ ಭಕ್ತರಿಗೆ ಪ್ರಸನ್ನ ಪ

ಬೇಗ ಬಾರೊ ಬೇಗ ಬಾರೊ ವೇಲಾಪುರದ ಚೆನ್ನ ಅ

ಇಂದಿರಾ ರಮಣಾ ಗೋವಿಂದಾ ಬೇಗ ಬಾರೊ
ನಂದನ ಕಂದ ಮುಕುಂದ ಬೇಗ ಬಾರೊ ೧

ರಂಗ ಉತ್ತುಂಗ ನರಸಿಂಗ ಬೇಗ ಬಾರೊ
ಕಂಗಳಿಗೆ ಸುಳಿವೊ ಮೋಹನಾಂಗ ಬೇಗ ಬಾರೊ ೨

ರುದ್ದ ಸಂವೃದ್ಧ ಅನಿರುದ್ಧ ಬೇಗಬಾರೊ
ಹದ್ದನೇರಿದ ಸುಪ್ರಸಿದ್ಧ ಬೇಗ ಬಾರೊ ೩

ಧೀರ ಉದಾರ ಗಂಭೀರ ಬೇಗ ಬಾರೊ.
ಹಾರಾಲಂಕಾರ ರಘುವೀರ ಬೇಗ ಬಾರೊ ೪

ಅಯ್ಯ ಸಿಂಹಯ್ಯ ವಿಜಯ್ಯ ಬೇಗ ಬಾರೊ
ಉದಯಾದ್ರಿವಾಸ ಹಯವದನ ಬೇಗ ಬಾರೊ ೫

೧೦ ರಾಗ ಅಠಾಣಾ ಅಟತಾಳ

ಮಾತು ಮಾತಿಗೆ ಕೇಶವ ನಾರಾಯಣ
ಮಾಧವ ಎನಬಾರದೆ, ಹೇ ಜಿಹ್ವೆ ಪ

ಪ್ರಾತಃಕಾಲದಲೆದ್ದು ಪಾರ್ಥಸಾರಥಿಯೆಂದು
ಪ್ರೀತಿಲಿ ನೆನೆದು *ಸದ್ಗತಿಯ ಹೊಂದದೆ ವ್ಯರ್ಥ
ಮಾತುಗಳಾಡಲ್ಯಾಕೆ ಹೇ ಜಿಹ್ವೆ ಅ

ಜಲಜನಾಭನ ನಾಮವು ಈ ಜಗಕೆಲ್ಲ
ಜನನ ಮರಣ ಹ-ರವು
ಸುಲಭವಾಗಿಹುದು ಸುಖಕೆ ಕಾರಣವಿದು
ಬಲಿದ ಪಾಪಗಳೆಲ್ಲ ಪರಿಹರಿಸುವುವೆಂದು
ತಿಳಿದು ತಿಳಿಯದಿಹರೇ ಹೇ ಜಿಹ್ವೆ ೧

ತರಳೆ ದ್ರೌಪದಿ ಸೀರೆಯ ಸೆಳೆಯುತಿರೆ
ಹರಿ ನೀನೆ ಗತಿಯೆನಲು
ಪರಮ ಪುರುಷ ಭವಭಂಜನ ಕೇಶವ
ದುರುಳರ ಮರ್ದಿಸಿ ತರುಣಿಗೆ ವರವಿತ್ತ
ಹರಿನಾಮ ಪ್ರಿಯವಲ್ಲವೆ ಹೇ ಜಿಹ್ವೆ ೨

ಹೇಮ ಕಶ್ಯಪಸಂಭವ ಈ ಜಗಕೆಲ್ಲ
ನಾಮವೆ ಗತಿಯೆನಲು
ಪ್ರೇಮದಿಂದಲಿ ಬಂದು ಕಾಮಿತಾರ್ಥಗಳಿತ್ತ
ಸ್ವಾಮಿ ಹಯವದನನ್ನ ನಾಮವ ನೆನೆಯುತ್ತ
ಯಾಮಯಾಮಕು ಬಿಡದೆ ಹೇ ಜಿಹ್ವೆ ೩

* ಸುಪ್ರೀತನಾಗುವುದಕ್ಕೆ (ಪಾಠಾಂತರ)

೧೧ ರಾಗ ಪೂರ್ವಕಲ್ಯಾಣಿ ಆದಿತಾಳ

ಶ್ರೀಶ ನೀನಹುದೊ ಶೇಷಚಲ
ವಾಸ ನೀನಹುದೊ ಪ

ಶೇಷಶಯನ ಸುರೇಶ ವಂದಿತಾ
ಶೇಷ ಜನರನು ಪಾಲಿಸಿ ಬಡ್ಡಿ
ಕಾಸು ಸೇರಿಸಿ ಗಂಟು ಕಟ್ಟುವ
ಕ್ಯಾಸಕ್ಕಿ ತಿಮ್ಮಪ್ಪ ನೀನೆ ಅ

ತಂದೆ ನೀನಹುದೊ ಕರುಣಾ
ಸಿಂಧು ನೀನಹುದೊ
ಅಂದು ದ್ರುಪದನ ನಂದನೆಯು ಎಳೆ
ತಂದು ಘಾಸಿಯು ಮಾಡುತಿರಲು
ಮುಂದೆಬಂದು ಅಕ್ಷಯವೆಂದು ಸಲಹಿದ
ಮಂದಹಾಸ ಮುಕುಂದನು ನೀನೆ ೧

ಧೀರ ನೀನಹುದೋ ಜಗದೊ
ದ್ಧಾರ ನೀನಹುದೊ
ಬಾರಿ ಬಾರಿಗೆ ನಿನ್ನ ಪಾದ ಸು
ವಾರಿಜಂಗಳ ಸೇರಿದ ಭಕ್ತರ
ಘೋರ ದುರಿತವ ದೂರ ಗೈಸುವ
ಮಾರಜನಕ ಅಪಾರಮಹಿಮನೆ ೨

ಧನ್ಯ ನೀನಹುದೋ ಸುರಮುನಿ
ಮಾನ್ಯ ನೀನಹುದೊ -
ಪನ್ನಗಾರಿವಾಹನ್ನ ಧರೆಯೊಳು
ಇನ್ನು ನಿನಗೆದುರಾರ ಕಾಣೆ ಪ್ರ
ಸನ್ನನಾಗೆಲೊ ಬಿನ್ನಹ ಕೇಳು ಪ್ರ
ಪನ್ನ ವತ್ಸಲ ಶ್ರೀ ಹಯವದನ ೩

## ೧೨ ರಾಗ ಧನ್ಯಾಸಿ ಝಂಪೆತಾಳ

ಏನು ಸುಕೃತವ ಮಾಡಿದಳೊ ಯಶೋದೆ ಪ

ಶ್ರೀನಿಧಿಯಾದ ಕೃಷ್ಣನ್ನ ಕರೆದೆತ್ತಿ ಮುದ್ದಿಪಳಂತೆ ಅ

ಗಂಗಾ ಜನಕಗೆ ಗಡಿಗೆ ನೀರನೆರೆವಳಂತೆ
ಮಂಗಳಾಂಗಗೆ ಭಾಮೆ ಶೃಂಗರಿಪಳಂತೆ
ತುಂಗ ಭೂಧರನ ತೊಟ್ಟಿಲೊಳು ಮಲಗಿಪಳಂತೆ
ಕಂಗಳಿಗೋಚರನ ಎತ್ತಿ ಮುದ್ದಿಪಳಂತೆ ೧

ಚತುರಾಸ್ಯನ ಪಿತನ ಸುತನೆಂದೆತ್ತುವಳಂತೆ
ಶ್ರುತಿವಿನುತಗೆ ಜೋಗುಳವ ಪಾಡುವಳಂತೆ
ಶತರವಿ ತೇಜಗಾರತಿಯ ನೆತ್ತುವಳಂತೆ
ಗತಭೀತನಿಗೆ ಭಾಮೆ ರಕ್ಷೆಯಿಕ್ಕುವಳಂತೆ ೨

ಜಗವನೆತ್ತಿದವನ ಮಗುವೆಂದೆತ್ತುವಳಂತೆ
ನಿಗಮಗೋಚರನ ಈಕ್ಷಿಸುವಳಂತೆ
ಅಗಣಿತಸದ್ಗುಣನ ಹಗ್ಗದಿ ಕಟ್ಟುವಳಂತೆ
ಮಿಗೆ ನಿತ್ಯತೃಪ್ತನಿಗೆ ಪಾಲನೆರೆವಳಂತೆ ೩

ಬಹು ಮುಖ[illegible] ಭಾಮೆ ಮುದ್ದನೀಡುವಳಂತೆ
ಅಹಿತಲ್ಪನಿಗೆ ಹ[illegible]ತ್ತುಳಿದೀಯೆಂಬುವಳಂತೆ
ಬಹು ದೈತ್ಯಸಂಹ[illegible] ಭಯವತೋರುವಳಂತೆ
ಮಹಿಮ ನರಸಿಂಹಗೆ ಗುಮ್ಮನತೋರುವಳಂತೆ ೪

ಕಡಗೋಲನೇಣನು ಕೈಯೊಳಗೆ ಪಿಡಿದು ಪಾ-
ಲ್ಗಡಲೊಡೆಯ ದ್ವಾರಕಾನಿಲಯ
ಬಿಡದೆ ಸಲಹುವ ಹಯವದನ ಮೋಹನ ಮುದ್ದು
ಉಡುಪಿನ ಕೃಷ್ಣನ್ನ ಉಡಿಯೊಳೆತ್ತುವಳಂತೆ ೫

## ಶ್ರೀ ವಾದಿರಾಜಸ್ವಾಮಿಗಳವರ ಕೃತಿಗಳು

೧೩ ರಾಗ ಕಾಂಬೋದಿ ಝಂಪೆತಾಳ ಪ

ಅ

ವಿಷಯಾಸೆ ಬಿಡಲೊಲ್ಲದೊ ದೇವ

ವಸುದೇವ ಸುತ ನಿನ್ನ ವಶವಾಗೊ ತನಕ

ಉದಯದಲಿ ಎದ್ದು ಹರಿಪದಗಳನು ಸ್ಮರಿಸದಲೆ
ಕುದಿಕುದಿದು ಪರರನ್ನು ಬೈಯ್ದು ಸುಯ್ದು
ಮುದದಿಂದ ಮಜ್ಜನವ ಮಾಡದಲೆ ಕಂಡಕಡೆ
ವದಗಿ ಪರಸದನ ಕಾಗಿ ಪೋಗಿ
ಮುದದಿಂದ ಗುರುಹಿರಿಯರಿಗೆ ನಾ ವಂದಿಸದೆ
ಕದನವನು ತೆಗೆದು ಬಂದು ನಿಂದು ೧
ಇದೇ ಸಾಧನವೆಂದು ಉದರ ನೆವದಲಿ ತಿರುಗಿ
ಸುದತಿಯರ ಸುಖಬಡಿಸಿ ಮದನ ವೆಗ್ಗಳನಾಡೆ

ದೇಶದೇಶಕ್ಕೆ ಧನದಾಸೆಗಾಗಿ ತಿರುಗಿ
ಬೇಸರದೆ ಮನೆಮನೆಗೆ ಪೋಗಿ ಕೂಗಿ
ಭೂಸುರೋತ್ತಮನು ನಾನೆಂದು ಪರರ ಮುಂದೆ
ಭೇಷಜವ ಹೇಳಿಕೊಂಡು ಭಂಡು
ಬೇಸರವಗೊಳಿಸಿ ನಿರ್ದೋಷಿ ನೀನೆಂದವನ
ಹೇಸದಲೆವಾಸಿ ಪೊಗಳಿ ಬೊಗಳಿ ೨
ಈಸು ಪರಿಯಲಿ ಧನವತಂದು ಕೂಳನೆ ಹಾಕಿ
ಈ ಸತಿಸುತರೆನಗೆ ಗತಿಯೆಂದು ಗುಣಿಸಿದೆನೊ

ಪರರ ಸೌಭಾಗ್ಯ ಮಕ್ಕಳುಗಳನು ನಾ ಕಂಡು
ಮರುಗಿ ಮನದೊಳಗೆ ಸೊರಗಿ ಕರಗಿ
ತೆರತೆರದಿ ಪರರಂಗನೆಯರ ಚೆಲ್ವಿಕೆ ಕ
ಭರದಿ ಕಣ್ಣಿಂದ ನೋಡಿ - ಬಾಡಿ
ಎರಗಿ ಮನ ಅವರಲ್ಲಿ ಏಕ
ಕರದಿ ಸನ್ನೆಯನು ಮಾ

ಹೊರಗೆ ಗುಣವಂತನೆಂದೆನಿಸಿ ಈ ಧರೆಯೊಳಗೆ
ಚರಿಸಿ ನಿನ್ನಂಘ್ರಿಯನು ನಾ ಮರೆದೆ ದೇವ ೩

ಓದಿದೆನು ವಿದ್ಯೆಗಳ ಓದನದ ಬಯಕೆಯಲಿ
ವೇದಶಾಸ್ತ್ರಗಳನ್ನು ಪಠಿಸಿ ನಟಿಸಿ
ಕಾದುವೆನು ತರ್ಕವ್ಯಾಕರಣಾದಿ ಬಲದಿಂದ
ಬೀದಿ ಪೀಠಿಯೊಳು ಚರಿಸಿ ಅರಸಿ
ಮಾಧವನ ಸ್ಮರಿಸದಲೆ ಪರರ ಅನ್ನವನುಂಡು
ಶೋಧಿಸದೆ ಪುಣ್ಯಪಾಪ ಲೇಪ
ಕ್ರೋಧದಿಂದಲಿ ಇನಿತು ಕುಧರ್ಮದಲಿ ಯಮನವರ
ಬಾಧೆಗೆ ಗುರಿಯಾಗಿ ಸದ್ಧರ್ಮವನು ಮರೆದೆ ೪

ಕಾಯದಾಸೆಗಳಿಂದ ನ್ಯಾಯವನು ಬಯಸದ
ನ್ಯಾಯವನು ಚಿಂತಿಸುತ್ತ ನಿತ್ಯ
ಹೇಯವಿಲ್ಲದೆ ಸ್ನಾನ ಸಂಧ್ಯಾನಗಳ ತೊರೆದು
ತೋಯಿಸದೆ ದೇಹವನ್ನು ಇನ್ನು
ಮಾಯಮೋಸಗಳಿಂದ ಬಾಯಿಗೆ ಬೇಕಾದ್ದು
ಆಯಾಸಪಟ್ಟು ತಂದು ತಿಂದು
ಶ್ರೀಯರಸ ಹಯವದನರಾಯನೆ ನಾ ನಿನ್ನ
ಮಾಯವನು ತಿಳಿಯದನ್ಯಾಯದಲಿ ಕೆಟ್ಟೆ ೫

### ೧೪ ರಾಗ ಪೂರ್ವಕಲ್ಯಾಣಿ ಆದಿತಾಳ

ಕಾವುದೆಮ್ಮನು ಜಗವ ಕಾವಕರುಣಿಯೆ ಪ

ದೇವ ಸುಖವ ದೇವ ಲಕುಮಿನಾರಾಯಣ ಅ

ಕುಲವಿಹಂಗ ಪತಿಯ ಶಿರದಿ
ರಕುಲ ಲಲಾಮ ವಿಭುವೆ ೧

ಮಧ್ವಮುನಿಯ ಕರಗಳೆಂಬ ಪದ್ಮದಿಂದ ಪೂಜಿತ ಪದ
ಗೆದ್ದು ಕುಜನ ತತಿಯ ಸುಜನರುದ್ಧರಿಸುವ ಸುಗುಣನಿಧಿಯೆ ೨

ಶಂಖ ಚಕ್ರಗದಾಪದುಮ ಅಂಕೆಗಳಿಂದ ಶೋಭಿತಕರ
ಪಂಕಜಾಕ್ಷ ಪಯೋಧಿಶಯನ ಶಂಕೆಯಿಲ್ಲದೆ ಹಯವದನ ೩

### ೧೫ ರಾಗ ಪೂರ್ವಿ ರೂಪಕತಾಳ

ಲೋಕಭರಿತನೋ ರಂಗನೇಕ ಚರಿತನೊ ಪ

ಶೋಕ ಜನರ ತರಿದು ತನ್ನೇಕಾಂತ ಭಕ್ತರ ಪೊರೆವ ಕೃಷ್ಣ ಅ

ರಾಜಸೂಯ ಯಾಗದಲ್ಲಿ ರಾಜರಾಜರಿರಲು ಧರ್ಮ
ರಾಜಸುತನು ಈತನೆ ಸಭಾ ಪೂಜೆ ಗರ್ಹನೆನಿಸಿ ದಾತ ೧

ಮಿಕ್ಕ ನೃಪರ ಜರಿದು ಅಮಿತ ವಿಕ್ರಮ ಯದುವರನೆ ತನಗೆ
ತಕ್ಕ ರಮಣನೆಂದು ರುಕ್ಮಿಣಿ ಉಕ್ಕಿ ಮಾಲೆಯಿಕ್ಕಿದಳಾಗ ೨

ಉತ್ತರೆಯ ಗರ್ಭದಲ್ಲಿ ಸುತ್ತುಮುತ್ತಿದ ಅಸ್ತ್ರವನ್ನು
ಒತ್ತಿ ಚಕ್ರದಿಂದ ನಿಜ ಭಕ್ತ ಪರೀಕ್ಷಿತನ ಕಾಯ್ದ ೩

ಜ್ಞಾನಶೂನ್ಯನಾಗಿ ಸೊಕ್ಕಿ ನಾನೆ ವಾಸುದೇವನೆಂದು
ಹೀನ ಪೌಂಡ್ರಕನ ಶಿರವ ಜಾಣರಾಯ ಖಂಡಿಸಿ ಮೆರೆದ ೪

ತನ್ನ ಸೇವಕಜನರ ಪೊರೆದು ಉನ್ನಂತ ಉಡುಪಿಯಲ್ಲಿ ನಿಂತು
ಘನ್ನ ಮಹಿಮೆಯಿಂದ ಮೆರೆವ ಪ್ರಸನ್ನ ಹಯವದನ ಕೃಷ್ಣ ೫

### ೧೬ ರಾಗ ಶಂಕರಾಭರಣ ಆದಿತಾಳ

ಬಾಲನೇನೆ ನಿನ್ನ ಮಗನು, ಗೋಪಾಲಕೃಷ್ಣ ಪ

ಬಾಲನೇನೆ ನಿನ್ನ ಮಗನು ಬಾಲಕೇರಾಲಯವ ಪೊಕ್ಕು
ಶೀಲಗೆಡಿಸಿ ಸಾಲದೆ ಗೋಕುಲವನ್ನು ಜಾಲಮಾಡಿದ - ಅ

ಕಾಲು ಇಲ್ಲದೆ ನಡೆವನೀತ ಮೇಲುಗಿರಿಯ ಬೆನ್ನೊಳಾಂತೆ
ಮೂಲ ಬೇರು ಮೆಲ್ಲುವಾತ ಜ್ವಾಲರೂಪಿ ಸ್ಥೂಲಕಾಯ
ಬಾಲನಾಗಿ ಭೂಮಿ ಬೇಡಿದ – ಹಾಲು ಕುಡಿಸಿದ
ತಾಯಿ ತಲೆಗೆ ಎರವು ಮಾಡಿದ – ವಾಲಕುಲ (ವಲ್ಕಲ)
ಸುಟ್ಟು ಅಡವಿ ಅಲೆದು ತಿರುಗಿದ, ಶ್ರೀರಾಮಚಂದ್ರ
ನೀಲವರ್ಣ ನಿಗಮ ಗೋಚರ
ಮೇಲುಪುರದ ಸೋರುಮುಡಿಯ
ಬಾಲೆಯರನು ಸೋಲಿಸಿದ
ಕಾಲದಲ್ಲಿ ಕಲ್ಕಿಯಾದ ೧

ಮಡುವಿನಲ್ಲಿ ಅಡಗಿ ಇರುವ ಪೊಡವಿ ದೊಡ್ಡನೆತ್ತಿ ಪೊರೆವ
ಅಡವಿಯಲ್ಲಿ ಅಡುತಿರುವ ಕಡುಕ್ರೂರ ಹಿಡಿದ ಹಟವ
ಹುಡುಗನಾಗಿ ಪೊಡವಿ ಬೇಡಿದ, ಕೊಡಲಿ ಪಿಡಿದು
ಕಡಿದು ಕ್ಷತ್ರರ ಕುಲವ ಸವರಿದ, ರಾವಣಾದಿ
ಪಡೆಯನೆಲ್ಲ ಸಂಹರಿಸಿದ, ಶ್ರೀರಾಮಚಂದ್ರ
ತುಡುಗುಮಾಡಿ ಗಡಿಗೆ ಪಾಲ
ಕುಡಿದು ಕಡಹನಲ್ಲಿ ಅಡಗಿ
ಬಿಡದೆ ತ್ರಿಪುರರ ವ್ರತವ ಕೆಡಿಸಿ
ಹಿಡಿದು ತೇಜಿಯ ನಡೆಸುತಿಹನು ೨

ನೀರ ಪೊಕ್ಕು ವೇದ ತಂದ ಭಾರಪೊತ್ತು ಬೆನ್ನಿಲಿಟ್ಟ
ಕೋರೆಹಲ್ಲು ತೋರುತಿರುವ ಕ್ರೂರವದನಾಪಾರ ಮಹಿಮ
ಮೂರುಪಾದ ಭೂಮಿ ಬೇಡಿದ, ವಿಪ್ರರ ಕರೆಸಿ
ಧಾರುಣಿಯದಾನ ಮಾಡಿದ, ಪರ್ವತಗಳ
ತರಿಸಿ ಶರಧಿಯನ್ನು ಕಟ್ಟಿದ, ಶ್ರೀರಾಮಚಂದ್ರ
ಜಾರ ಚೋರ ಮಾರನೈಯ
ನಾರೆರಪ್ಪಿ ಮರುಳು ಮಾಡಿ
ವಾರಿಜಾಕ್ಷ ಹಯವದನ
ಏರಿ ಕುದುರೆ ವೈಹಾಳಿಮಾಡಿದ – ೩

೧೭ ರಾಗ ಶಂಕರಾಭರಣ ಅಟತಾಳ

ಇಂದಿರಾರಸ ಚಂದ್ರಮಂಡಲ
ಮಂದಿರಾಖಿಳ ವಂದ್ಯ ಹಯಮುಖ
ಎಂದೆಂದನಮನ ದಿಂದಗಲದಿರೊ
ಮಂದರಾದ್ರಿಧರ ಪ

ತುಂಗ ಮಹಿಮ ತುರಂಗ ವದನ ಶು
ಭಾಂಗ ರಿಪುಕುಲ ಭಂಗ ಸಜ್ಜನ
ಸಂಗ ಎನ್ನಂತರಂಗ ಮಲಿನವ
ಹಿಂಗಿಸುವುದೆಂತೊ
ಮಂಗಳಾತ್ಮ ಗುಣಂಗಳಬ್ಧಿಗೆ
ತಿಂಗಳೆಸಿಸುವ ಅಂಗಜನ ತಂದೆ
ರಂಗ ನಿನ್ನ ಪದಂಗಳಬ್ಜಕೆ
ಭೃಂಗನಪ್ಪೆನೆಂತೊ ೧

ವಾರಿಜಾಕ್ಷ ಮುರಾರಿ ಮದವೆಂಬ
ಮಾರಿ ಮುಸುಕಿತು ಸಾರಿ ಮತ್ಸರ
ಮಾರರೊಡಗೂಡಿ ದಾರಿತಪ್ಪಿಸಿ
ಗಾರುಮಾಡಿತೆನ್ನ
ನಾರಿ ಕ್ರೋಧ ಮಹೋರಗನ ವಿಷ
ದಾರಿಗೆ ಭಯಕಾರಿ ಹರಿ ನಿನ್ನ
ಚಾರು ಚರಣವ ಸಾರಿದೆ ನಿಂದು
ತೋರಿ ಸಲಹಬೇಕೊ ೨

ಧನ್ಯ ಸುರರ ಜೀವನ್ನ ಕರುಣಾ ಸಂ
ಪನ್ನ ನಿತ್ಯ ಪ್ರಸನ್ನ ಚಿನ್ಮಯ
ಪನ್ನಗಾರಿ ವಾಹನ್ನ ಶಶಿಸಮ
ವರ್ಣ ಪುರುಷ ರನ್ನ -

ನಿನ್ನ ಪಾದ ಪಾವನ್ನ ಸುರತರು
ವಿನ್ನ ನೆಳಲೊಳಿಟ್ಟೆನ್ನ ರಕ್ಷಿಸು
ಅನ್ಯಥಾ ಗತಿಶೂನ್ಯ ನಾಸೆಲೊ
ಪೂರ್ಣ ಹಯವದನ - ೩

೧೮ ರಾಗ ಮೋಹನ ಝಂಪೆತಾಳ

ಅನುದಿನವು ಶ್ರವಣ ಮನನಾದಿ ಸಾಧನ ಮಾಡೊ
ಇನ್ನು ಸಂಶಯವ್ಯಾತಕೊ ಪ

ಏನು ಶಪಥವ ಮಾಡಲೀ ಮತವು ಪಿರಿದೆಂದು
ಜ್ಞಾನಿಗಳ ಸಮ್ಮತವೊ ಪ್ರಾಣಿ ಅ

ವರಮಧ್ವಶಾಸ್ತ್ರವೇ ಸಕಲ ಶಾಸ್ತ್ರಾಧಿಕೆಂದು
ಶಿರವರಿದು ಮುಂದಿಡಿಸಲೋ
ಪರಮತ ಜಾಲಗಳು ವೇದವಿರುದ್ಧವೆಂದು
ಶರಧಿಯನು ನೆರೆದಾಟಲೋ ಪ್ರಾಣಿ ೧

ಭಾಗವತ ಶಾಸ್ತ್ರವೆ ಬಹು ಭಾಗ್ಯವೆಂತೆಂದು
ಭಾರ ಶಿರದಲಿ ವಹಿಸಲೊ
ಭಾಗವತ ನಿಂದಕಗೆ ಬಹುನರಕವೆಂತೆಂದು
ಪರ್ವತಾಗ್ರದಿ ಧುಮುಕಲೋ ೨

ಪರಲೋಕ ಸಾಧನೆಗೆ ತಾರತಮ್ಯ ಮತವೆಂದು
ಕ್ರೂರ ವಿಷವನು ಕುಡಿಯಲೋ
ಹರಿದಿನಕೆ ಮರುದಿನ ಸರಿಯಿಲ್ಲವೆಂತೆಂದು
ಹರಿವ ಹಾವನು ಹಿಡಿಯಲೋ ಪ್ರಾಣಿ ೩

ವಿದಿತ ದೈವಗಳೊಳಗೆ ವಿಷ್ಣು ಉತ್ತಮನೆಂದು
ವೇದಗಳ ವಡ ನುಡಿಸಲೊ
ಅಧಿಕಾರಿಗಳೊಳಗೆ ಅಬುಜ ಸಂಭವನೆಂದು
ಆಗಮಗಳು ಸರಿಸಲೊ ಪ್ರಾಣಿ ೪

ಗುರು ಮಧ್ವರಾಯರೇ ಆತ್ಮರಕ್ಷಕರೆಂದು
ಅನಲ ಕೈಯಲಿ ಪಿಡಿಯಲೋ
ಸಿರಿಹಯವದನನೆ ಅಮಿತಗುಣ ಪೂರ್ಣನೆಂದು
ಅಶರೀರವನು ನುಡಿಸಲೋ ಪ್ರಾಣಿ ೫

*೧೯ ರಾಗ ಯದುಕುಲಕಾಂಬೋದಿ ತ್ರಿಪುಟತಾಳ

ನೋಡಿದೆನೊ ನಿನ್ನ – †ವೈಕುಂಠ ರನ್ನ ಪ
ನೀರಜನಯನನೆ ನಿರ್ಮಲ ಗುಣರನ್ನ ಅ

ಅನಾಥನೊ ನಾನು ಎನಗೆ ಬಂಧುವೊ ನೀನು
ನಿನ್ನವರಂತೆ ನೋಡೋ ನೀನಾಗಿ ದಯಮಾಡೊ ೧

ಎನ್ನ ಕುಂದುಗಳನ್ನು ಎಣಿಸಲಾಗದೊ ದೇವ
ಪನ್ನಗಾಚಲವಾಸ ನೀನೇ ಕಾಯೊ ನಿರ್ದೋಷ ೨

ದೇಶದೇಶದವರ ಪೊರೆದಂತೆ ಪೊರೆಯೆನ್ನ
ಶೇಷಾಚಲ ಘನ್ನ ಶ್ರೀಶ ಶ್ರೀಹಯವದನ ೩

೨೦ ರಾಗ ಮೋಹನ ಅಟತಾಳ

ಈವ ರೀತಿಯಿಂದ ನೀನೆನ್ನ ಪಾಲಿಸೊ
ಶ್ರೀ ವಿಭು ಹಯವದನ ಪ

‡ಈ ವಿವಿದ ಭವ ಎಷ್ಟು ದಿನವೊ ಇನ್ನು
ತಾವರೆದಳನಯನ, ಹಯವದನ ಅ

---

* ಶ್ರೀ ವಾದಿರಾಜಸ್ವಾಮಿಗಳವರು ತಿರುಪತಿ ಯಾತ್ರೆಗೆ ಹೊರಟು ಬೆಟ್ಟವನ್ನು ಹತ್ತಲು, ಪ್ರಾರಂಭಿಸಿದಾಗ ಪರ್ವತವೆಲ್ಲವೂ ಸಾಲಿಗ್ರಾಮವಾಗಿ ಕಾಣ ಬರಲು, ಪಾದಸ್ಪರ್ಶಮಾಡುವುದಕ್ಕೆ ಹಿಂಜರಿದು ಮೊಳಕಾಲುಗಳಿಂದಲೇ ದೇವಸ್ಥಾನದವರೆಗೆ ನಡೆದುಕೊಂಡು ಹೋಗಿಸ್ವಾಮಿಯ ದರ್ಶನಮಾಡಿದರಂತೆ. ಆ ಕಾಲದಿಂದ ಆ ಪ್ರದೇಶಕ್ಕೆ ಮೊಳಕಾಲ್ಮುರಿ ಎಂಬ ಹೆಸರುಬಂತೆಂಬ ಐತಿಹ್ಯವಿದೆ. ಈ ಪದವನ್ನು ಆ ಸಂದರ್ಭದಲ್ಲಿ ಹಾಡಿದರೆಂದು ಹೇಳುತ್ತಾರೆ.

† ವೆಂಕಟರನ್ನ (ಪಾ.)

‡ ಈ ವಿಧ ಭವಣೆಯು (ಪಾಠಾಂತರ)

ಕಾಮನ ಬಾಧೆಗೆ ತಡೆಯಲಾರದೆ ಕಂಡ
ಕಾಮಿನಿಯರನೆ ಕೂಡಿ
– ಕಂಡ ಕಂಡ ಕಾಮಿನಿಯರನೆ ಕೂಡಿ
ನೇಮನಿಷ್ಠೆಯ ಬಿಟ್ಟು ನಿನ್ನನು ಭಜಿಸದೆ
ಪಾಮರನಾನಾದೆನೋ, ಹಯವದನ ೧

ಅಂಗನೆಯರಲ್ಲಿ ಅಧಿಕ ಮೋಹಿತನಾಗಿ
ಶೃಂಗಾರಗಳನೆ ಮಾಡಿ
– ವಿಧ ವಿಧ ಶೃಂಗಾರಗಳನೆ ಮಾಡಿ
ಮಂಗಳಾಂಗ ನಿನ್ನ ಮಹಿಮೆಯ ಪೊಗಳದೆ
ಭಂಗಕ್ಕೆ ಗುರಿಯಾದೆನೋ, ಹಯವದನ ೨

ಹೀನಗುಣಗಳೆಲ್ಲ ಹಯಮುಖದೇವನೆ
ಮಾಣಿಸುವಂತೆ ಮಾಡು
– ಎಂದೆಂದಿಗೂ ಮಾಣಿಸುವಂತೆ ಮಾಡು
ಜ್ಞಾನಿಗಳರಸನೆ ದಯವಿಟ್ಟು ನಿನ್ನನು
ಧ್ಯಾನಿಸುವಂತೆ ಮಾಡು, ಹಯವದನ ೩

## ೨೧ ರಾಗ ಕೇದಾರಗೌಳ ತ್ರಿಪುಟತಾಳ

ಈಗಲೋ ಇನ್ನ್ಯಾವಾಗಲೋ ಈ ತನುವು ಪೋಗದಿರದು ಪ
ಭೋಗದಾಸೆಯ ಬಿಡಿಸೈಯ ನಾಗಶಯನ ನಳಿನ ನಯನ ಅ

ಎಂಭತ್ತು ನಾಲಕು ಲಕ್ಷಯೋನಿಗಳಲಿ ಬಂದು ಬಂದು
ಅಂಬುಜಾಕ್ಷನೊಂದೆನ್ನೈಯ ಅಂದಂದು ಮಾಡಿದ ಅಘದಿ
ಕುಂಭೀಪಾಕವೆ ಮೊದಲಾದ ಕುತ್ಸಿತ ನರಕದಿ ಬಿದ್ದು
ಉಂಬ ದುಃಖವ ಬಿಡಿಸೈಯ ಉದಧಿಶಯನ ಪುಣ್ಯಕಥನ ೧

ಓದಿ ಮರುಳಾದೆನ್ನೈಯ ಓದನ ಮಾತ್ರಕ್ಕೆ ಸಭೆಯೊಳ್
ವಾದಿಸುವೆ ವೇದಶಾಸ್ತ್ರ ಉಪನ್ಯಾಸಂಗಳನು ಮಾಡುವೆ

ಕ್ರೋಧವಶನಾಗಿ ಅವರು ಕೊಡಲು ಕೊಂಡಾಡುವೆ
ಆದರಿಸದಿದ್ದರವರ ಬೈದುಬರುವೆ ಖಿನ್ನನಾಗಿ ೨

ದೇಶದೇಶಂಗಳಿಗೆ ಧನಾದಾಸೆಗಾಗಿ ಪೋಗಿಪೋಗಿ
ಬೇಸರದೆ ಕಂಡವರನು ಕಾಡಿಬೇಡಿ ಬಳಲಿಸುವೆ
ಕಾಸಿನ ಲಾಭವಕಾಣೆ ಘಾಸಿಯಾಗಿ ನೊಂದೆ ಶ್ರೀನಿ
ವಾಸ ನಿನ್ನ ಪೂಜಿಸದೆ ಮೋಸಪೋದೆನ್ನೈಯ ಹರಿಯೆ ೩

ಸ್ನಾನಮೌನಂಗಳನು ಮಾಡುವೆ ಸಕಲ ಜನರ ಮುಂದೆ
ಮಾನವರು ಇಲ್ಲದಾಗಲೆ ಮೌನವಿಲ್ಲ ಮಂತ್ರವಿಲ್ಲ -
ಜ್ಞಾನವ ಪೇಳುವೆ ಪೋಗಿ ಧನವ ಕೊಟ್ಟವರಿಗೆ
ಧ್ಯಾನಿಸದೆ ಪೊಟ್ಟೆಯನ್ನು ನಾನು ಪೊರೆವೆ ನಿನ್ನ ಮರೆವೆ ೪

ಹೆಣ್ಣು ಹೊನ್ನಿನಾಸೆ ಬಿಡದು ಪುಣ್ಯಕ್ಕೆ ಮನ ಒಡಂಬಡದು
ಎನ್ನದೆಂಬೊ ಮಮತೆ ತಗ್ಗದು ಧನ್ಯಜನಕೆ ಶಿರವು ಬಗ್ಗದು
ನಿನ್ನವಾರ್ತೆಯು ಕರ್ಣ ಕೇಳದು ಅನ್ಯವಾರ್ತೆಗೆ ಹೊತ್ತುಸಾಲದು
ಇನ್ನು ಹೇಸಿಕೆ ಮನಕೆಬಾರದು ಮುಂದಿನಗತಿ ದಾರಿತೋರದು ೫

ಅಂಬುವರ ನಾನರಿಯೆ ಕುಟುಂಬಗಳನು ಸಲಹಲೋಸುಗ
ತಿಂಬೆ ಹೀನರ ಮನೆಯೊಳನ್ನವ ನಂಬೆ ನಿನ್ನ ಚರಣವ
ಹಂಬಲಿಸಿ ವಿಷಯಗಳಿಗೆ ಡೊಂಬನಾಗಿ ಕೆಟ್ಟು ವೃಥಾ
ಕುಂಭಿಣೀಗೆ ಭಾರವಾದೆನು ಕಂಬುಕಂಧರ ನಿನ್ನ ನೆನೆಯದೆ ೬

ವೃದ್ಧನಾದೆನು ಪಲ್ಲಳೆಲ್ಲವು ಬಿದ್ದವು ಕಣ್ಣು ಕಾಣಲೀಸದು
ಎದ್ದು ನಿಲ್ಲಲಾರೆನ್ನೈಯ ಉದ್ಧರಿಸೊ ಹಯವದನ
ತಿದ್ದಿ ಮನವ ನಿನ್ನ ಪಾದಪದ್ಮವ ನೆನೆವಂತೆ ಮಾಡೊ
ಪೊದ್ದಿದವರ ಪೊರೆವ ಕರುಣಾಸಿಂಧು ಎನಗೆ ಪರಮಬಂಧು ೭

೨೨ ರಾಗ ನವರೋಜು ಝಂಪೆತಾಳ

ಲಾಲಿ ಲಾಲೀ ಹನುಮ ಭೀಮ ಮಧ್ವಾರ್ಯ
ಲಾಲಿ ರಾಮಕೃಷ್ಣ ವ್ಯಾಸರ ಪ್ರಿಯ ಲಾಲಿ ಪ

ಮೂಜಗದಲಿ ನೀ ಬಾಲ ಬ್ರಹ್ಮಚಾರಿ
ಈ ಜಗದಲಿ ಕಪಿ ರಾಜ್ಯವನಾಳಿ
ತೇಜಮುತ್ತಿನ ಕವಚ ಕುಂಡಲಧಾರಿ
ಪೂಜಿಸರ ಪಾಲಿಪೆ ಸುಜನರುಪಕಾರಿ ಲಾಲಿ ೧

ಭೂಮಿ ಭಾರವನಿಳುಹೆ ಬಂದೆ ಕಲಿಭೀಮ
ಕಾಮಿ ಕೀಚಕರನ್ನು ಕುಟ್ಟಿ ರಣಧಾಮ
ಭಾಮಿನೀ ದ್ರೌಪದಿ ಕಷ್ಟನಿರ್ಧೂಮ
ಕಾಮಿತಾರ್ಥಗಳಿತ್ತು ಸಲಹೊ ನಿಸ್ಸೀಮ ಲಾಲಿ ೨

ಸೌಂದರ್ಯರೂಪದ ಶ್ರೀಮಧ್ವಾನಂದ
ತಂದೆ ಹಯವದನನ ಮೋಹದ ಕಂದ
ಬಂದು ಉಡುಪಿಯಲ್ಲಿ ನೆಲೆಯಾಗಿ ನಿಂದ
ವಂದಿಸುವೆ ನಿದ್ರೆಗೈ ಹರಿಧ್ಯಾನದಿಂದ ಲಾಲಿ ೩

೨೩ ರಾಗ ನವರೋಜು ರೂಪಕತಾಳ

ಲಾಲಿ ಶ್ರೀ ಹಯವದನ ಲಾಲಿ ರಂಗ ವಿಠಲ
ಲಾಲಿ ಗೋಪೀನಾಥ ಲಕ್ಷ್ಮೀ ಸಮೇತ ಲಾಲಿ ಪ

ಮುತ್ತು ಮಾಣಿಕ ಬಿಗಿದ ತೊಟ್ಟಿಲೊಳ ಗೊಲ್ಲ
ಎತ್ತಿದರು ಎನ್ನಯ್ಯ ಕಯ್ಯೊಳಗೆ ನಿಲ್ಲ
ಭಕ್ತರಿಗೆ ವರಗಳನು ಕೊಡುವ ಹೊತ್ತಿಲ್ಲ
ಪುತ್ರನ ಎತ್ತಿಕೋ ನಂದ ಗೋಪಾಲ ಲಾಲಿ ೧

ಮನೆಯೊಳಗೆ ಇರನೀತ ಬಹು ರಜ್ಜೆವಂತ
ಮನೆವಾರ್ತೆ ಯಾರು ಮಾಡುವರು ಶ್ರೀಕಾಂತ
ಗುಣಿ ಗುಣಗಳೊಳಗಿಪ್ಪ ಬಹು ಗುಣವಂತ
ಗುಣಬದ್ಧನಾಗದಿಹ ಶ್ರೀ ಲಕ್ಷ್ಮೀಕಾಂತ ಶಾಲಿ ೩

ಕ್ಷೀರಾಂಬುನಿಧಿಯೊಳಗೆ ನೆಜ್ಜೆಯೊಳಗಿರುವ
ಶ್ರೀರಮಣ ಭಕ್ತರಿಚ್ಛೆಗೆ ನಲಿದುಬರುವ
ಕಾರುಣ್ಯ ಹಯವದನ ಕಾಯ್ವ ತುರುಕರುವ
ಸೀರೆ ಗೋಪಿಯರೊಳು ಮೆರೆವ ಕಡುಚೆಲುವ ಶಾಲಿ ೪

೨೪ ರಾಗ ಪವರೋಜು ಆದಿತಾಳ

ಎಷ್ಟು ಸಾಹಸವಂತ ನೀನೆ ಬಲವಂತ
ಧಿಟ್ಟ ಮೂರುತಿ ಭಳಿ ಭಳಿರೆ ಹನುಮಂತ ಪ

ಅಟ್ಟಹಾಸದಿಂ ದಸುರರ ತಲೆಗಳ
ಕುಟ್ಟಿ ಚಂಡಾಡಿದೆ ಘಟ್ಟಿರೆ ವಂತ ಅ

ರಾಮರಪ್ಪಣೆಯಿಂದ ಶರಧಿಯ ದಾಟಿ
ಆ ಮಹಲಂಕೆಯ ಕಂಡೆ ಕಿರೀಟಿ
ಸ್ವಾಮಿಕಾರ್ಯವನು ಪ್ರೇಮದಿ ನಡೆಸಿದೆ
ಈ ಮಹಿಯೊಳು ನಿನಗಾರ್ಯ್ಯ ಸಾಟಿ ೧

ದೂರದಿಂದಸುರನ ಊರನ್ನೆ ನೋಡಿ
ನಾರಾಯಣ ಪದ ಧ್ಯಾನವ ಮಾಡಿ
ಹಾರಿದೆ ಹರುಷದಿ ಹರಿಹರಿಯೆನ್ನುತ
ವಾರಿಜ ಮುಖಿಯನು ಕಂಡು ಮಾತಾಡಿ ೨

ರಾಮರ ಕ್ಷೇಮವ ರಮಣಿಗೆ ಪೇಳಿ
ಆ ಮಹಾಜಾನಕಿ ಹರುಷವ ತಾಳಿ
ತಾಮಸಗೊಳ್ಳದೆ ಮುದ್ರಿಕೆಯೊಪ್ಪಿಸಿ
ಆ ಮರದೊಳಗಂದು ಫಲವನು ಬೇಡಿ ೩

ಶೃಂಗಾರವನದೊಳಗಿದ್ದ ರಕ್ಕಸರ
ಅಂಗವ ಸೀಳಿದೆ ಬಹು ರಣಶೂರ
ಸುಂಗಲಿ ಬಂದ ಲಂಖಿಣಿಯೆಂಬಳ
ಅಂಗವನೊರೆಸುತ ಲಂಘಿಸಿ ಮೆರೆದೆ ೪

ಕಣ್ಣಿಗೆ ಪ್ರಿಯವಾದ ಹಣ್ಣನ್ನೆ ಕೊಯ್ದು
ಹಣ್ಣಿಗೆ ಅಸುರರ ಕದನದಿ ಹೊಯ್ದು
ಪಣ್ಣಪಣ್ಣನೆ ನೆಗೆನೆಗೆದಾಡುತ
ಬಣ್ಣಗೆಡಿಸಿದೆ ದಾನವಾನ್ವಯವ ೫

ದೂರು ಹೇಳಿದರೆಲ್ಲ ರಾವಣನೊಡನೆ
ವೀರ ರಾವಣ ನುಡಿದನು ಮಗನೊಡನೆ
ಚೋರ ಕಪಿಯನು ಹಿಡಿತರಿಸೆನ್ನುತ
ಶೂರರ ಕರೆಸಿ ಸಾರುತ ನುಡಿದ ೬

ಹತ್ತು ಕೋಟಿ ರಕ್ಕಸರ ಒಡಗೊಂಡು ಬಂದು
ಮುತ್ತಿದರಶೋಕ ವನವನೆ ಕಂಡು
ಎತ್ತಿದ ಕೈಯಲಿ ಏಳು ಕೋಟಿಯನು
ಕತ್ತು ಮುರಿದು ಸಾಮರ್ಥ್ಯದಿ ಸಿಂದ ೭

ಹೊಡೆದನು ಇಂದ್ರಜಿತು ಬ್ರಹ್ಮಾಸ್ತ್ರದಿಂದ
ಹಿಡಿ ಮುರಿ ಕಟ್ಟಿದ ಸಾಹಸದಿಂದ
ಘುಡುಘುಡುಗುಟ್ಟುತ ಕಿಡಿಕಿಡಿಯುಗುಳುತ
ನಡೆದನು ಲಂಕೆಯ ಒಡೆಯನಿದ್ದೆಡೆಗೆ ೮

ಕಂಡನು ದಶಶಿರ ದಿಂಡೆ ಕಪಿಯನು
ಮಂಡೆಯ ತೂಗುತ ಮಾತಾಡಿಸಿದನು
ಭಂಡೇಳಿಸಿದನು ಹಿಂಡು ರಕ್ಕಸರ
ಕಂಡಿರೆ ಇಂಥ ಪ್ರಚಂಡ ಕಪಿಯನು ೯

ಎಲೆ ಎಲೆ ಕೋಡಗ ಛಲವೇತಕೆಲವೊ
ನೆಲೆಯ ಪೇಳೋ ನಿನ್ನ ಕಳುಹಿದನಾವ
ಎಲೊ ಎಲೊ ಖೂಳರಕ್ಕಸ ನಿನ್ನ ತಲೆಗಳ
ಸುಲಿದು ತಾರೆನ್ನುತ ರಾಮರ್ಹೇಳಿದರು ॥೧೦॥

ನಿನ್ನಂಥ ದೂತರು ರಾಮನ ಬಳಿಯೊಳು
ಇನ್ನೆಷ್ಟು ಇದ್ದಾರೊ ವಿವರವ ಪೇಳು
ನನ್ನಂಥ ದೂತರು ನಿನ್ನಂಥ ಪ್ರೇತರು
ಇನ್ನೂರು ಮುನ್ನೂರು ಕೋಟಿ ಉಂಟೆಂದ ॥೧೧॥

ಇದಕ್ಯಾಕೊ ನಿನಗಿಷ್ಟು ಮದಗರ್ವವೆನುತ
ಗದೆಯನೆತ್ತಿದ ದಶಗ್ರೀವ ಗರ್ಜಿಸುತ
ಅಧಮಾಧಮ ದೈತ್ಯನೆ ನಿನ್ನೀಕ್ಷಣ
ವಧಿಸುವೆ ಕಾರಣ ಬೇರಿಹುದೆಂದ ॥೧೨॥

ಜಡರಾವಣ ನಿನ್ನ ಬಡಿದು ಹಾಕುವೆನೊ ಒ
ನ್ನೊಡೆಯನಪ್ಪಣೆಯಿಲ್ಲವೆನುತ ತಾಳಿಹೆನೊ
ಜಡಮತಿ ಪರರೊಡವೆಗೆ ಅಳುಕುವ ಪಾಪಿ
ತೊಡೆವೆನೊ ನಿನ್ನ ಪಣೆಯಕ್ಷರವ ॥೧೩॥

ಕಡುಕೋಪದಿಂದಲಿ ಮೂಢ ರಕ್ಕಸನು
ಪುಡಿರೆಂದ ಲಾಂಗೂಲ ಸುತ್ತಿ ವಸ್ತ್ರವನು
ಒಡೆಯನಾಜ್ಞೆಯಲಿ ಬಾಲವ ಬಳಸಿ
ಪಿಡಿಯುತ ನಿಂದರು ದಡಿಗ ರಕ್ಕಸರು ॥೧೪॥

ತಂದರು ಸೀರೆಯ ಕೋಟ್ಯಾಂತರವ
ಅಂದದಿ ಸುತ್ತುತ ನಿಂದು ಅಂಬರವ
ಚಂದದಿ ಹೇರಳ ತೈಲದೊಳದ್ದಿ
ನಿಂದರು ಹನುಮನ ಬಾಲವ ಬಳಸಿ ॥೧೫॥

ಬಾಲವ ಅಸುರರು ಭದ್ರದಿಂ ಪಿಡಿದು
ಶಾಲೆಗಳ್ ಸುತ್ತಿದರು ಓಸು ಜನಗಳದು
ಕಿಲಿಕಿಲಿ ನಗಲು ಬಾಲದ ಗಂಟೆಯು
ಘಲಿರೆನೆ ಗೆಳೆಯನ ಕಂಡ ಹಿಂದಿನಲಿ ೧೬

ಕುಣಿಕುಣಿದಾಡುತ ಕೂಗಿ ಬೊಬ್ಬಿಡುತ
ಅಣಕವಾಡುತ ಅಣಕಿಸುತ ಬೀದಿಲಿ ತಾ
ಎಣಿಕಿಯಿಲ್ಲದೆ ಮನೆಮನೆದಹಿಸುತ
ಮಣಿದೆತ್ತಿದ ರಾಘವ ಗಾರತಿಯ ೧೭

ಮಂಗಳಂ ಶ್ರೀರಾಮಚಂದ್ರ ಮೂರುತಿಗೆ
ಮಂಗಳಂ ಸೀತಾದೇವಿ ಚರಣಂಗಳಿಗೆ
ಮಂಗಳವೆನುತ ಲಂಕೆಯ ಸುಟ್ಟು
ಲಂಘಿಸಿ ಅಸುರನ ಗಡ್ಡಕೆ ಹಿಡಿದ ೧೮

ಹತ್ತಿತು ಅಸುರನ ಗಡ್ಡ ಮೀಸೆಗಳು
ಸುತ್ತಿತು ಹೊಗೆ ಬ್ರಹ್ಮಾಂಡ ಕೋಟಿಗಳು
ಚಿತ್ತದಿ ರಾಘವ ಚಿಂತಿಪನೆನುತ ವಿ
ಚಿತ್ರದಿ ಬಂದನು ರಾಮನ ಬಳಿಗೆ ೧೯

ಸೀತೆಯ ಕ್ಷೇಮವ ರಾಮಗೆ ಪೇಳೆ
ಪ್ರೀತಿಯಿಂದಲಿ ದೇವ ಹರುಷವ ತಾಳೆ
ಸೇತುವೆ ಕಟ್ಟಲು ಚತುರಂಗ ಬಲ ಸಹ
ಮುತ್ತಿತು ಲಂಕೆಯ ಹೆಬ್ಬಾಗಿಲಿಗೆ ೨೦

ವೆಗ್ಗಳವಾಯಿತು ಶ್ರೀರಾಮನ ದಂಡು
ನೆಗ್ಗಿಸಿ ತಾ ದೈತ್ಯರ ಬಲ ಕಂಡು
ವೆಗ್ಗಳ ದೈತ್ಯರ ಶಿರಗಳ ನಿಳುಹುತ
ಭಗ್ನವಮಾಡಿದರು ಪ್ರತಿಭಟರುಗಳ ೨೧

ರಾವಣ ಮೊದಲಾದ ರಾಕ್ಷಸರ ಕೊಂದು
ಆ ವಿಭೀಷಣನನ್ನ ಸ್ಥಿರವಾಗಿ ಬಾಳೆಂದು
ದೇವಿ ಸೀತೆಯನು ಒಡಗೊಂಡಯೋಧ್ಯದಿ
ದೇವ ಶ್ರೀರಾಮ ಸಾಮ್ರಾಜ್ಯವಾಳಿದನು ೨೨

ಶಂಖ ದೈತ್ಯನ ಕೊಂದೆ ಶರಣು ಶರಣ್ಯೆಯು
ಶಂಖ ಗಿರಿಯಲಿ ನಿಂದೆ ಹನುಮಂತರಾಯ
ಪಂಕಜಾಕ್ಷ ಹಯವದನ ಕಟಾಕ್ಷದಿ
ಲಂಕೆಯ ಸುಟ್ಟಿ ಸೈ ಸಂಜೀವ ೨೩

೨೫ ರಾಗ ಕಾಂಬೋದಿ ಝಂಪೆತಾಳ

ಮನ್ನಿಸೋ ನೀನೆನ್ನ ಮಧ್ವಮುನಿರನ್ನ ಪ

ಚೆನ್ನ ಶ್ರೀ ಹರಿಪಾದಪದ್ಮ ಸೇವಕನೆ ಅ

ಅಂಜನೆಯ ಗರ್ಭಾಂಬು ನಿಧಿ ಪೂರ್ಣಚಂದ್ರಮನೆ
ಕಂಜಪ್ರಿಯ ಸುತನಿಗೆ ಕಲ್ಪತರುವೆ
ರಂಜಿಸುವ ಶ್ರೀರಾಮಚಂದ್ರನ್ನ ಸೇವಕನೆ
ಸಂಜೀವ ಗಿರಿತಂದ ಮಹಾತ್ಮ ನೀನೆ ೧

ಅರ್ಜುನಗೆ ಅಣ್ಣನಾಗಿ ಅಖಿಲ ದಿಕ್ಕೆಲ್ಲವನು
ಲಜ್ಜೆಯನು ಕೆಡಿಸಿ ಪೃಥ್ವಿಪರನು ಮುರಿದೆ
ಮೂರ್ಜಗವು ಮೆಚ್ಚಲು ಮಾಗಧನ ಸೀಳಿದೆ
ಸಜ್ಜನ ಪ್ರಿಯ ಭೀಮಸೇನ ಉ - ದಾರ ೨

ಮೂರಾರು ಎರಡೊಂದು ಮೂಢಮತಗಳ ಜರಿದು
ಸಾರ ಮಧ್ವಶಾಸ್ತ್ರ ಸಜ್ಜನರಿಗೊರೆದು
ಧೀರ ಶ್ರೀ ಹಯವದನ ಕೂರ್ಮ ಸೇವಕನಾಗಿ
ಮೂರು ಲೋಕದಿ ಮೆರೆದೆ ಮಧ್ವ ಮುನಿರಾಯ ೩

### ೨೬ ರಾಗ ಕಾಪಿ ಛಾಪುತಾಳ

ಮುದ್ದು ಮುಖದಾತ ನಮ್ಮ ಮುಖ್ಯಪ್ರಾಣನಾಥನೊ ಪ

ಸದ್ಗುರುವಂದಿತ ವಾಯುಜಾತನೊ ರಾಮದೂತನೊ ಅ

ಜಾನಕೀಶನ ವೈರಿ ಶೂಲನೊ ಬಹು ಧೀರನೊ
ಮಾನಿನಿ ಸೀತೆಯ ಕಂಡು ಬಂದನೊ ಮುಂದೆ ನಿಂದನೊ ೧

ವಾನರ ರೂಪಿಲಿ ಮುದ್ರೆಯಿತ್ತನೊ ವನ ಕಿತ್ತನೊ
ಆ ನಗರ ಮನೆಗಳೆಲ್ಲ ಸುಟ್ಟನೊ ಬಲು ಧಿಟ್ಟನೊ ೨

ಸಾಗರವ ದಾಟಿ ಬಂದ ಶೂರನೊ ಗಂಭೀರನೊ
ರಾಗ ತಾಳ ವ್ಯಾಳದಲ್ಲಿ ಜಾಣನೊ ಪ್ರವೀಣನೊ ೩

ನಂಬಿದ ಭಕ್ತರ ಕಾಯ್ವ ದಾತನೊ ಪ್ರಖ್ಯಾತನೊ
ಅಂಬುಜಾಸನ ಪದಕೆ ಬಂದು ನಿಂತನೊ ಹನುಮಂತನೊ ೪

ಹಯವದನ ಭಕ್ತ ಚೆಲ್ವ ತೇಜನೊ ಯತಿರಾಜನೊ
ಮಾಯಿಗಳ ಕುಲಕೆ ಬಲು ಭೀಮನೊ ಸಾರ್ವಭೌಮನೊ ೫

### ೨೭ ರಾಗ ಪೂರ್ವಕಲ್ಯಾಣಿ ಅಟತಾಳ

ಆರ್ಯನ ಯೋಗಧುರ್ಯನ ಭಜಿಸಿ ಪ

ವರ್ಯನ ಮಧ್ವಾಚಾರ್ಯನ ಅ

ನಿರ್ಜಿತ ಪಾಷಂಡ ಯೂಥನ ದೋಷ
ವರ್ಜಿತ ಕಾವ್ಯ ಪ್ರಬಂಧನ
ನಿರ್ಜರ ಗುರುಪೂರ್ಣ ಬೋಧನ ಸರ್ವ
ಸಜ್ಜನರಿಗೆ ಗತಿದಾತನ ೧

ಅಕಳಂಕ ಮಹಿಮ ಚರಿತನ ಈ
ಸಕಲ ಜಗಕೆ ಪವಿತ್ರನ

ಪ್ರಕಟ ಭಾರತಿ ಕಳತ್ರನ ಪಾಪ
ನಿಕರ ಕಾನನ ವೀತಿಹೋತ್ರನ ೨

ಪದವುಲ ಲಕ್ಷ್ಮಣತುಂಗನ ಸಿರಿ
ಸದನನ ಕರುಣಾಂತ ರಂಗನ
ಮದಮೋಹ ತಿಮಿರಪತಂಗನ ಹಯ
ವದನನ ಚರಣಾಬ್ಜ ಭೃಂಗನ ೩

೨೮ ರಾಗ ಪಂತುವರಾಳಿ ಅಟತಾಳ

ನೆರೆನಂಬಿ ಪಡೆಯಿರೋ ಹಿತವ ನಮ್ಮ ಪ

ಗುರುವಾದ ಮಧ್ವಮುನಿಯು ಸಮ್ಮತವ ಅ

ತ್ರೇತೆಯೊಳಂಜನಾ ತನಯನಾಗಿ
ಸೀತಾರಮಣ ರಘುನಾಥಗೆ ಪ್ರಿಯ
ದೂತತನದಿ ಖಳ ತತಿಯ ಕೊಂದು
ಖ್ಯಾತಿಪಡೆದ ಹನುಮನಾದ ಯತಿಯ ೧

ದ್ವಾಪರದೊಳು ಭೀಮನೆನಿಸಿ, ಪಾಂಡು
ಭೂಪನರಸಿ ಕುಂತಿ ದೇವಿಯೊಳುದಿಸಿ
ಶ್ರೀಪತಿಗರ್ಥಿಯ ಸಲಿಸಿ, ನೃಪಾ
ನೃಪರೆಲ್ಲರ ಕೊಂದ ಮಹಿಮನ್ನ ಭಜಿಸಿ ೨

ಕಲಿಯುಗದೊಳು ಯತಿಯಾಗಿ ಈ
ಇಳೆಯ ದುಶ್ಶಾಸ್ತ್ರವ ಮುರಿದ ವಿರಾಗಿ
ಕುಲಗುರು ಶ್ರೀ ಮಧ್ವಯೋಗಿ ನಮ್ಮ
ಚೆಲುವ ಹಯವದನನ ಭಂಟನೆಂದು ಬಾಗಿ ೩

### ೨೯ ರಾಗ ಕಲ್ಯಾಣಿ ತ್ರಿಪುಟತಾಳ

ಆಂಜನೇಯನೆ ಅಮರವಂದಿತ ಕಂಜನಾಭನ ದೂತನೆ ಪ
ಸಂಜೀವನವನು ತಂದು ಕಪಿಗಳ ನಂಜುಕಳೆದ ಪ್ರಖ್ಯಾತನೆ ಅ

ಕಾಮನಿಗ್ರಹನೆನಿಸಿ ಸುರರಭಿಮಾನ್ಯ ದೇವತೆ ಎನಿಸಿದೆ
ರಾಮ ಪಾದಕ್ಕೆರಗಿ ನಡೆದು ನಿಸ್ಸೀಮ ನೀನೆಂದೆನಿಸಿದೆ ೧

ಸಿಂಧುಹಾರಿದೆ ಶೀಘ್ರದಿಂದಲಿ ಬಂದು ಸೀತೆಗೆ ನಮಿಸಿದೆ
ತಂದು ಮುದ್ರಿಕೆಯಿತ್ತು ಮಾತೆಗೆ ಅಂದು ಸಂತೋಷ ಬಡಿಸಿದೆ ೨

ಜನಕತನಯಳ ಮನವ ಹರುಷಿಸಿ ವನವ ಕಿತ್ತೀಡಾಡಿದೆ
ದನುಜರನ್ನು ಸದೆದು ಲಂಕೆಯನನಲ ಗಾಹುತಿನೀಡಿದೆ ೩

ಘೋರರಕ್ಕಸರೆಂಬುವರನು ಮಾರಿವಶವನು ಗೈಸಿದೆ
ಶ್ರೀರಾಮ ಕಾರ್ಯವ ವಹಿಸಿ ಅಕ್ಷಕುಮಾರನನು ಸಂಹರಿಸಿದೆ ೪

ಭರದಿಬಂದು ಶ್ರೀರಾಮ ಪಾದಕ್ಕೆರಗಿ ಬಿನ್ನಹಮಾಡಿದೆ
ಉರಗಗಿರಿ ಹಯವದನನ ಪರಮಭಕ್ತನೆಂದೆನಿಸಿದೆ ೫

### ೩೦ ರಾಗ ಕಾಂಬೋದಿ ಝಂಪೆತಾಳ

ರಾಮಪದ ಸರಸೀರುಹ ಭೃಂಗ ಪ
ರೋಮಕೋಟಿ ಲಿಂಗ ಅಸುರಮದ ಭಂಗ ಅ

ಒಂದು ನಿಮಿಷಕ್ಕೆ ಪೋಗಿ ಸಂಜೀವನವ ತಂದೆ
ಕಂದು ಗೊರಳನ ಭಜಕ ನಂದನನ ಕೊಂದೆ
ಇಂದ್ರಸೂನುವಿನ ಭಕುತಿಗೆ ರಥಾಗ್ರದಿನಿಂದೆ
ವೃಂದಾರಕಾರಿಪುರ ಹೋಮಮಾಡಿಬಂದೆ ೧

ಮೆರೆವ ಗದೆಯಿಂದ ಕೌರವನ ತೊಡೆಗಳ ತರಿದೆ
ಧುರದಲ್ಲಿ ಮಾಗಧನ ಮರ್ಮಸ್ಥಳ ಮುರಿದೆ
ದುರುಳ ದುಶ್ಶಾಸನನ ಕರುಳುಗಳನೇ ಹರಿದೆ
ಎರಡು ಬಲವನು ನೋಡಿ ಕೈಬೀಸಿ ಕರೆದೆ ೨

ಧರೆಯೊಳಗೆ ಅತ್ಯಧಿಕ ಸೋದೆಪುರನಿವಾಸ
ಸಿರಿ ಹಯವದನನ್ನ ಪರಮಪ್ರಿಯ ದಾಸ
ನೆರೆ ನಿನ್ನ ನಂಬಿದ ಭಕುತರಿಗೆ ಕೊಡು ಲೇಸ
ಕರುಣಾವಾರಿಧಿ ಗುರುವೆ ಮುಖ್ಯ ಪ್ರಾಣೇಶ ೪

೪೧ ರಾಗ ಸೌರಾಷ್ಟ್ರ ಅಟತಾಳ

ಆನಂದ ತೀರ್ಥರೆಂಬ ಅರ್ಥಿಯ ಪೆಸರುಳ್ಳ
ಗುರು ಮಧ್ವಮುನಿರಾಯ ಪ
ಏನೆಂಬೆ ನಿನ್ನಯ ಮಹಾ ಮಹಾತ್ಮೆಯ
ಗುರು ಮಧ್ವಮುನಿರಾಯ ಅ
ಮುಖ್ಯಪ್ರಾಣ ನೀನಾಗಿ ಮುನಿರೂಪವ ತಾಳ್ದೆ
ಗುರು ಮಧ್ವಮುನಿರಾಯ
ಸೊಕ್ಕಿದ ದೈತ್ಯರ ಸೊಕ್ಕ ನೀ ಮುರಿದೆಯೊ
ಗುರು ಮಧ್ವಮುನಿರಾಯ ೧
ವಾನರ ರೂಪಿಲಿ ವಾರಿಧಿ ದಾಟಿದೆ
ಗುರು ಮಧ್ವಮುನಿರಾಯ
ಜಾನಕಿಗುಂಗುರ ಕೊಟ್ಟ ವನವನೀ ಮುರಿದಿಟ್ಟೆ
ಗುರು ಮಧ್ವಮುನಿರಾಯ ೨
ಕ್ಷಿತಿಯೊಳು ಕುಂತಿಯಲ್ಲಿ ಜನಿಸಿದೆಯೊ ನೀನು
ಗುರುಮಧ್ವಮುನಿರಾಯ
ಅತಿಶಯದಿಂದ್ಯದುಪತಿಯ ಪೂಜಿಸಿದೆಯೊ
ಗುರು ಮಧ್ವಮುನಿರಾಯ ೩
ಅಕ್ಕರೆಯಿಂದಲಿ ಬದರಿಯನೈದಿದೆ
ಗುರು ಮಧ್ವಮುನಿರಾಯ
ಏಕವಿಂಶತಿ ಕುಭಾಷ್ಯವ ಜರಿದೆಯೊ
ಗುರು ಮಧ್ವಮುನಿರಾಯ ೪

ಅತಿ ಹಿತದಿಂ ಹಯವದನನ್ನ ಭಜಿಸಿದ್ಯೋ
ಗುರು ಮಧ್ವಮುನಿರಾಯ
ಸತತ ಭಕ್ತರನ್ನು ಸಲಹುವೆಯೋ ನೀನು
ಗುರು ಮಧ್ವಮುನಿರಾಯ ೫

**೩೨ ರಾಗ ಪಂತುವರಾಳಿ ತ್ರಿಪುಟತಾಳ**

ಒಂದು ಬಾರಿ ಸ್ಮರಣೆ ಸಾಲದೆ ಆ ಪ

ನಂದ ತೀರ್ಥರ ಪುಣ್ಯಪ್ರಜ್ಞರ
ಸರ್ವಜ್ಞರಾಯರ ಮಧ್ವರಾಯರ ಅ

ಹಿಂದನೇಕ ಜನ್ಮದಲ್ಲಿ ನೊಂದು ಯೋನಿಯಲ್ಲಿ ಬಂದು
ಇಂದಿರೇಶನ ಪಾದವನ್ನು ಹೊಂದಬೇಕೆಂಬುವರಿಗೆ ೧

ಆರುಮಂದಿ ವೈರಿಗಳನು ಸೇರಲೀಸದಂತೆ ನೂಕಿ
ಧೀರನಾದ ಹರಿಯ ಪಾದ ಸೇರಬೇಕೆಂಬುವರಿಗೆ ೨

ಪ್ರಕೃತಿಬಂಧದಲ್ಲಿ ಸಿಲುಕಿ ಸಕಲ ವಿಷಯಗಳಲಿ ನೊಂದು
ಅಕಳಂಕ ಚರಿತ ಹರಿಯ ಪಾದಭಕುತಿ ಬೇಕೆಂಬುವರಿಗೆ ೩

ಘೋರ ಸಂಸಾರಾಂಬುಧಿಗೆ ಪರಮಜ್ಞಾನವೆಂಬ ವಾಡೆ
ಏರಿ ಮೆಲ್ಲನೆ ಹರಿಯ ಪಾದ ಸೇರಬೇಕೆಂಬುವರಿಗೆ ೪

ಹೀನಬುದ್ಧಿಯಿಂದ ಶ್ರೀ ಹಯವದನನ್ನ ಜರಿದು
ತಾನು ಬದುಕಲಾರದಿರಲು ತೋರಿಕೊಟ್ಟ ಮಧ್ವಮುನಿಯ ೫

**೩೩ ರಾಗ ಸಾದನಾಮಕ್ರಿಯ ಆದಿತಾಳ**

ಆನಂದ ಮಯಗೆ ಚಿನ್ಮಯಗೆ, ಲಕ್ಷ್ಮೀ
ನಾರಾಯಣಗಾರುತಿ ಯೆತ್ತಿರೆ ಪ

ವೇದವ ತಂದು ಬೆಟ್ಟವ ಪೊತ್ತು ಧರಣಿಯ
ಸಾಧಿಸಿ ಕಂಭದೊಳುದಿಸಿದಗೆ

ಭೂದಾನವ ಬೇಡಿ ನೃಪರ ಸಂಹರಿಸಿದ
ಆದಿಮೂರುತಿಗಾರುತಿ ಯೆತ್ತಿರೆ ೧

ಇಂದುವದನೆ ಸೀತೆ ಸಹಿತಲರಣ್ಯಾದಿ
ನಂದಗೋಕುಲದಲ್ಲಿ ನಲಿದವಗೆ
ಮಂದಗಮನೆಯರ ಮುಂದೆ ನಿರ್ವಾಣದಿ
ನಿಂದ ಮೂರುತಿಗಾರುತಿ ಯೆತ್ತಿರೆ ೨

ತುರಗವನೇರಿ ದುಷ್ಟರ ಸೀಳಿ ಸುಜನರ
ಪೊರೆವಮಂಗಳ ಹಯವದನನಿಗೆ
ವರದ ವೇಲಾಪುರ ಚೆನ್ನಿಗರಾಯನ
ಚರಣಕಮಲಕಾರತಿ ಯೆತ್ತಿರೆ ೩

## ಕೇಶವ ನಾಮ

### ೩೪ ರಾಗ ಪೀಲು ಆದಿತಾಳ

ರಂಗ ಬಾರೋ ನರಸಿಂಗ ಬಾರೊ ಪ

ಅಂಗಜನ್ಪಿಯ ಕೋನೇರಿ ತಿಮ್ಮ ಬಾರೊ ಅ

ಸಾಸಿರ ಮೂರುತಿ ವಾಸವಾದಿ ವಂದ್ಯ -
ಸಾಸಿರ ನಾಮದೊಡೆಯನೆ -
ಸಾಸಿರನಾಮದೊಡೆಯನೆ ಶ್ರೀಕೃಷ್ಣ
ಕೇಶವ ನಮ್ಮ ಮನೆದೈವ ೧

ವಾರಣ ವಂದ್ಯನೆ ಕಾರುಣ್ಯ ರೂಪನೆ
ಪುರಾಣಗಳಲಿ ಪೊಗಳುವ -
ಪುರಾಣಗಳಲಿ ಪೊಗಳುವ ಶ್ರೀಕೃಷ್ಣ
ನಾರಾಯಣ ನಮ್ಮ ಮನೆದೈವ ೨

ಯಾದವ ಕುಲದಲಿ ಸಾಧುಗಳರಸನೆ
ಭೇದಿಸಿ ದನುಜರ ಗೆಲಿದನೆ –
ಭೇದಿಸಿ ದನುಜರ ಗೆಲಿದನೆ ಶ್ರೀಕೃಷ್ಣ
ಮಾಧವ ನಮ್ಮ ಮನೆದೈವ ೩

ಶೋಭಾನೆ

ಗೋವರ್ಧನಗಿರಿಯನೆತ್ತಿ ದೇವೇಂದ್ರನಮಳೆಗರೆಯೆ
ಆ ಗಿರಿಯ ಕೃಷ್ಣ ಕೊಡೆ ಮಾಡಿ
ಆ ಗಿರಿಯ ಕೃಷ್ಣ ಕೊಡೆ ಮಾಡಿ ನೆಗಹಿದ
ಗೋವಿಂದ ನಮ್ಮ ಮನೆದೈವ—ಶೋಭಾನೆ ೪

ಸೃಷ್ಟಿಗೆ ಕರ್ತನೆ ದುಷ್ಟ ಕಂಸನ ಕೊಂದು
ಶಿಷ್ಟ ಪರಿಪಾಲನೆನಿಸಿದ
ಶಿಷ್ಟ ಪರಿಪಾಲನೆನಿಸಿದ ಶ್ರೀಕೃಷ್ಣ
ವಿಷ್ಣುವೆ ನಮ್ಮ ಮನೆದೈವ—ಶೋಭಾನೆ ೫

ಮಧುವೆಂಬ ದೈತ್ಯನ ಸದೆದು ಮರ್ದಿಸಿದನೆ
ವಿದುರನ ಮನೆಯಲಿ ನಲಿದುಂಡ
ವಿದುರನ ಮನೆಯಲಿ ನಲಿದುಂಡ ಶ್ರೀಕೃಷ್ಣ
ಮಧುಸೂದನ ನಮ್ಮ ಮನೆದೈವ—ಶೋಭಾನೆ ೬

ಸುವ್ವಿ

ಚಕ್ರಭೂತಳದಲ್ಲಿ ಚಕ್ರವ ಪಿಡಿದನೆ
ಅಕ್ರೂರನೊಡನೆ ಮಧುರೆಗೆ
ಅಕ್ರೂರನೊಡನೆ ಮಧುರೆಗೆ ಪೋದ ತ್ರಿ
ವಿಕ್ರಮ ನಮ್ಮ ಮನೆದೈವ ೭

ಸಾಮವ ನೋದುತ ದಾನವ ಬೇಡುತ
ನಾಮದ ಮಹಿಮೆಯ ಪೊಗಳುತ
ನಾಮದ ಮಹಿಮೆಯ ಪೊಗಳುತ ಬಂದ ಶ್ರೀ
ವಾಮನ ನಮ್ಮ ಮನೆದೈವ ೮

ಶ್ರೀಧರನ ಗೆಲಿದನೆ ಶ್ರೀವತ್ಸಲಾಂಛನ
ಶ್ರೀಧರ ಗೋಪೇರರಸನೆ
ಶ್ರೀಧರ ಗೋಪೇರರಸನೆ ಶ್ರೀ ಕೃಷ್ಣ
ಶ್ರೀಧರ ನಮ್ಮ ಮನೆದೈವ ೯

**ಉರುಟಾಣಿ**

ಋಷಿಜನ ವಂದ್ಯನೆ ಬಿಸಜನಾಭನೆ ದೇವ
ಋಷಿಜನರಿಗೆಲ್ಲ ಅಭಯವ ಕೊಡುತಿದ್ದ
ಋಷಿಜನರಿಗೆಲ್ಲ ಅಭಯವ ಕೊಡುತ್ತಿದ್ದ
ಹೃಷೀಕೇಶನೆ ನಮ್ಮ ಮನೆದೈವ ೧೦

ಪದ್ಮಸಂಭವ ಪಿತ ಪದ್ಮ ದಾಮೋದರನೆ
ಪದ್ಮದಿಂದಭಯವ ಕೊಡುತಿದ್ದ ಭಕ್ತರಿಗೆ
ಪದ್ಮದಿಂದಭಯವ ಕೊಡುತಿದ್ದ ಶ್ರೀಕೃಷ್ಣ
ಪದ್ಮನಾಭನೆ ನಮ್ಮ ಮನೆದೈವ ೧೧

ನೇಮಿಗಳ ನೇಮವನು ಪ್ರೇಮದಿಂದಲಿ ಕಾಯ್ವ
ನಾಮದ ಮಹಿಮೆಯ ಪೊಗಳುವ ಜನರನ್ನು
ನಾಮದ ಮಹಿಮೆಯ ಪೊಗಳುವರನು ಕಾಯ್ವ
ದಾಮೋದರನೆ ನಮ್ಮ ಮನೆದೈವ ೧೨

**ತಂದನನ - ತಾನಂದನನ**

ಶಂಕರನೆಂಬ ಜಟ್ಟಿಗನು ಪಂಕಜನಯನನು
ಶಂಕೆಯಿಲ್ಲದೆ ಅಸುರರ

ಶಂಕೆಯಿಲ್ಲದೆ ಅಸುರರ ಸಂಹರಿಸಿದ
ಸಂಕರ್ಷಣ ನಮ್ಮ ಮನೆದೈವ ೧೩

ವಸುದೇವ ಸುತನಾಗಿ ಶಿಶುಪಾಲನನು ಗೆದ್ದು
ವಶವಮಾಡಿಕೊಂಡು ತ್ರಿಪುರರ
ವಶವಮಾಡಿಕೊಂಡು ತ್ರಿಪುರರ ಸಂಹರಿಸಿದ
ವಾಸುದೇವ ನಮ್ಮ ಮನೆದೈವ ೧೪

ಮುದ್ದುಮೋಹನ ಹರಿಯುಚ್ಛಿದ್ರ ರೂಪನೆ
ಪದ್ಮವಲ್ಲಭದ ತರುಣಿಯ
ಪದ್ಮಾವಲ್ಲಭನ ತರುಣಿಯರಸನಾದ
ಪ್ರದ್ಯುಮ್ನ ನಮ್ಮ ಮನೆದೈವ ೧೫

ಕೋಲುಪದ

ವನಜಲೋಚನ ಹರಿಯು ವಿನಯವುಳ್ಳವನೆಂದು
ಧ್ವನಿಗೇಳಿ ಬಂದ ಕುಬುಜೆಯು – ಕೋಲೆ
ಧ್ವನಿಗೇಳಿಬಂದ ಕುಬುಜೆಯು ನೋಡೆಲೊ ಹರಿಯು,
ಅನಿರುದ್ಧ ನಮ್ಮ ಮನೆದೈವ ಕೋಲೆ ೧೬

ಪಾರಿಜಾತವ ತಂದು ನಾರೇರಿಗಿತ್ತನೆ
ವೀರ ದಾನವರ ಮಡುಹಿದ – ಕೋಲೆ
ವೀರ ದಾನವರ ಮಡುಹಿದ ಶ್ರೀಕೃಷ್ಣ
ಪುರುಷೋತ್ತಮ ನಮ್ಮ ಮನೆದೈವ ಕೋಲೆ ೧೭

ಪಕ್ಷಿವಾಹನ ವಿಷ್ಣು ಅಕ್ಷಯರೂಪನೆ
ಕುಕ್ಷಿಯೊಳಗೆ ಅಭಯವ ಕೋಲೆ
ಕುಕ್ಷಿಯೊಳಗೆ ಅಭಯವ ಕೊಡುತಿದ್ದಾ
ಧೋಕ್ಷಜ ನಮ್ಮ ಮನೆದೈವ ಕೋಲೆ ೧೮

ಜೋ ಜೋ

ಅದುಭುತ ರೂಪದಿ ಹಿರಣ್ಯಕನ
ಉದರವ ಬಗೆದು ಕರುಳ ವನಮಾಲೆ
ಉದರ ಬಗೆದು ಕರುಳ ವನಮಾಲೆ ಹಾಕಿದ
ನಾರಸಿಂಹ ನಮ್ಮ ಮನೆದೈವ ಜೋ ಜೋ ೧೯

ಅಚ್ಯುತಾನಂತನೆ ಸಚ್ಚಿದಾನಂದನೆ
ಮತ್ಸ್ಯಾವತಾರದಿ ನಲಿದನೆ
ಮತ್ಸ್ಯಾವತಾರದಿ ನಲಿದನೆ ಶ್ರೀಕೃಷ್ಣ
ಅಚ್ಯುತನೆ ನಮ್ಮ ಮನೆದೈವ ಜೋ ಜೋ ೨೦

ಜಾನಕಿ ರಮಣನೆ ಸಜ್ಜನರೊಡೆಯನೆ
ಗಾನವಿನೋದಿ ಜ್ಞಾನಿಗಳರಸೆ
ಗಾನವಿನೋದಿ ಜ್ಞಾನಿಗಳರಸನೆ
ಜನಾರ್ದನ ನಮ್ಮ ಮನೆದೈವ ಜೋ ಜೋ ೨೧

ಮಂಗಳಂ

ಅಪರಿಮಿತ ಮಹಿಮನೆ ವಿಪರೀತ ಚರಿತನೆ
ಗುಪಿತದಲಿ ಸರ್ವರನು ಪಡೆದವನೆ
ಗುಪಿತದಲಿ ಸರ್ವರನು ಪಡೆದವನೆ ಶ್ರೀಕೃಷ್ಣ
ಉಪೇಂದ್ರನೆ ನಮ್ಮ ಮನೆದೈವ ೨೨

ಹರಗೆ ಭಸ್ಮಾಸುರನು ಎದುರು ಬಂದಪ್ಪಲು
ತರುಣಿಯ ರೂಪವನು ತಾಳಿದವನೆ
ತರುಣಿಯ ರೂಪವನು ತಾಳಿದ ಶ್ರೀಕೃಷ್ಣ
ಹರಿಯೆ ನಮ್ಮ ಮನೆದೈವ ೨೩

ಕೃಷ್ಣಾವತಾರದಲಿ ದುಷ್ಟರ ಗೆಲಿದನೆ
ವೃಷ್ಣಿಯರ ಕುಲತಿಲಕನೆನಿಸಿದನೆ

ವೃಷ್ಣಿಯರ ಕುಲತಿಲಕನೆನಿಸಿದ ಶ್ರೀಕೃಷ್ಣ
ಶ್ರೀಕೃಷ್ಣನೆ ನಮ್ಮ ಮನೆದೈವ ೨೪

### ಫಲಶ್ರುತಿ

ಇಪ್ಪತ್ನಾಲ್ಕು ನಾಮಂಗಳ ಪಾಡುವೆನು
ಅಪ್ಪ ಚೆನ್ನಕೇಶವಾದಿ ನಾಮಂಗಳ
ಅಪ್ಪ ಚೆನ್ನಕೇಶವಾದಿ ನಾಮಂಗಳ ಪಾಡಿದರೆ
ಒಪ್ಪಿಸಿಕೊಂಬನು ಹಯವದನ - ಮಂಗಳಂ ಜಯಮಂಗಳಂ ೨೫

### ೩೨ ರಾಗ ಸುರುಟಿ ಛಾಪುತಾಳ

ಹಣವೇ ನಿನ್ನಯ ಗುಣವೆನಿತು ಬಣ್ಣಿಪೆನಯ್ಯ
ಹಣವಿಲ್ಲದವನೊಬ್ಬ ಹೆಣಕಿಂತ ಕಡೆಯ್ಯಯ ಪ

ಬೆಲೆಯಾಗದನೆಲ್ಲ ಬೆಲೆಯ ಮಾಡಿಸುವಿ
ಎಲ್ಲಾ ವಸ್ತುಗಳನ್ನಿದ್ದಲ್ಲೇ ತರಿಸುವಿ
ಕುಲಗೆಟ್ಟವರ ಸತ್ಕುಲಕೆ ಸೇರಿಸುವಿ
ಹೊಲೆಯನಾದರು ತಂದು ಒಳಗೆ ಸೇರಿಸುವಿ ೧

ಅಂಗನೆಯರ ಸಂಗವನು ಮಾಡಿಸುವಿ
ಶೃಂಗಾರಾಭರಣಂಗಳ ತರಿಸುವಿ
ಮಂಗನಾದರು ಅನಂಗನೆಂದೆನಿಸುವಿ
ಕಂಗಳಿಲ್ಲದವಂಗೆ ಮಗಳ ಕೊಡಿಸುವಿ ೨

ಹರಣಕ್ಕೆ ಬಂದಂಥ ದುರಿತವ ಬಿಡಿಸುವಿ
ಸರುವರಿಗೆ ಶ್ರೇಷ್ಠ ನರನೆನಿಸುವಿ
ಅರಿಯದ ಶುಂಠನ ಅರಿತವನೆನಿಸುವಿ
ಸಿರಿಹಯವದನನ ಸ್ಮರಣೆ ಮರೆಯಿಸುವಿ ೩

### ೩೬ ರಾಗ ಕಾಂಬೋದಿ ಝಂಪೆತಾಳ

ಹ್ಯಾಂಗೆ ಕೊಟ್ಟನು ಹೆಣ್ಣು ಸಾಗರನು ಈ ವರಗೆ ಪ
ಶೃಂಗಾರ ಪುರುಷರು ಬಹುಮಂದಿ ಇರಲು ಅ

ಗುಷ್ಟ ವ್ಯಯಕಂಪು ನಟ್ಟಿದಾತನ ಕಣ್ಣು
ಮುಟ್ಟಿನೋಡಿದರೆ ವ್ಯಯತಿ ಕಠಿಣವು
ನೊಟ್ಟ ಮೋರೆಯು ಇವಗೆ ಎಷ್ಟುದ್ದ ಹಲ್ಲುಗಳು
ಇಷ್ಟು ಘೋರದ ಅಳಿಯ ಎಲ್ಲಿ ದೊರಕಿದನೊ ೧

ಕಾಡುವ ಭಿಕ್ಷುಕನು ಮಾಡದುದ ಮಾಡುವನು
ನೋಡಿದರೆ ತಲೆಯು ಜಟೆ ಕಟ್ಟಿಹುದು
ಓಡೋಡುತಲಿ ಕಳುವ ಬೆಡಗು ನುಡಿಗಾರನಿಗೆ
ನೋಡಿ ನೋಡಿ ಹೆಣ್ಣು ಹೇಗೆ ಕೊಟ್ಟನೊ ಇನ್ನು ೨

ಕಂಡವರ ಕೂಡೆಲ್ಲ ಕಾಳಗವ ಕೊಂಡು ಭೂ
ಮಂಡಲದೊಳಗೆ ಉದ್ದಂಡನಿವನು
ಅಂಡಜವಾಹನಗೆ ಯೋಗ್ಯವಾದ ಹೆಣ್ಣು
ಕಂಡುಕಂಡೀ ಹಯವದನರಾಯನಿಗೆ

### ೩೭ ರಾಗ ರೇಗುಪ್ತಿ ಝಂಪೆತಾಳ

ನೀ ಕರುಣದಿಂದೆನ್ನ ಪಾಲಿಸದಿದ್ದೊಡೆ
ನಾಕಾಣೆ ಮನ್ನಿಸುವವರ ಪ

ಸಾಕಾರರೂಪ ಸರ್ವೋತ್ತಮನು ನೀನು ಪ
ರಾಕು ಮಾಡದೆ ಎನ್ನನು ದೇವ ಅ

ಗುರು ಹಿರಿಯರನು ಕಂಡು ತರಳತನದಲಿ ನಾನು
ಚರಣಕೆರಗದೆ ಬರುವೆನು
ಪರುವ ಸಂಪದವನ್ನು ಬೇಡಿ ಬಯಸುತ ನಿನ್ನ
ಸ್ಮರಣೆಯನು ಮರೆತಿದ್ದೆನೊ

ಸ್ಮರನ ಬಾಣಕೆ ಸಿಲುಕಿ ಪರಸತಿಗೆ ಒಳಗಾಗಿ
ದುರ್ಗತಿಗೆ ನೆಲೆಯಾದೆನೊ
ಸಿರಿಯರಸನೇ ನಿನ್ನ ಚರಣವನು ನಂಬಿದೆನೊ
ಕಡೆ ಹಾಯಿಸೋ ಎನ್ನನೂ ದೇವ ೧

ಆರು ಮಂದಿಗಳೆಂಬ ಕ್ರೂರವೈರಿಗಳಿಂದ
ಮೂರಾದೆನವರ ದೆಸೆಗೆ
ಮಾರಿ ಹಬ್ಬದ ಕುರಿಯು ತೋರಣವ ಮೆಲುವಂತೆ
ತೋರುತಿದೆ ಎನ್ನ ಮತಿಗೆ
ಘೋರತರ ಸಂಸಾರ ಶರಧಿಯು ದಾಟಿಸುವ
ಸಾರುತಿದೆ ಬಿರುದು ನಿನಗೆ
ಮಾರಸ್ವೈಯನೆ ನಿನ್ನ ಚರಣವನು ನಂಬಿದೆನು
ಪಾರಗಾಣಿಸೊ ಎನ್ನನೂ ದೇವ ೨

ಹಲವು ಜನ್ಮಗಳಲ್ಲಿ ಬಲುನೊಂದು ಬಾಯಾರಿ
ಬಳಬಳನೆ ತಿರುಗುತಿಹೆನೊ
ಸಲೆ ಉದರಪೋಷಣೆಗೆ ತಲೆಹುಳುಕ ನಾಯಂತೆ
ಹಲವು ಮನೆ ಅಲೆಯುತಿಹೆನೊ
ಜಲದ ಮೇಲಿನ ಗುಳ್ಳೆಯಂತಿಪ್ಪ ಈ ದೇಹ
ನಲೆಯೆಂದು ನೆಚ್ಚುತಿಹೆನೋ
ಜಲಜನಾಭನೆ ನಿಮ್ಮ ಮಹಿಮೆಯನು ಪೊಗಳುವೆನೊ
ಚೆಲುವ ಹಯವದನ ಕಾಯೋ ದೇವಾ ೩

೩೮ ರಾಗ ಕಾಂಬೋದಿ ಝಂಪೆತಾಳ

ಸಕಲಸಾಧನವೆನಗೆ ಕೈಸೇರಿತು ಪ

ಮುಕುತಿಯ ಸಾಧನಕೆ ತುಸಬಾರದ ಧನವು ಅ

ಸಂಸಾರದಲಿ ಜ್ಞಾನ ಸತಿಸುತರಲಿ ಭಕ್ತಿ
ಕಂಸಾರಿ ಪೂಜೆಯಲಿ ವೈರಾಗ್ಯವು

ಸಂಶಯದ ಜನರಲ್ಲಿ ಸಖತನವ ಮಾಡುವೆನು
ಹಿಂಸೆ ಪಡಿಸುವೆ ಸುಜನ ಸಂಘವನು ಹರಿಯೆ ೧

ವಿಷಯಂಗಳಲಿ ಧ್ಯಾನ ಲೌಕಿಕದಲಿ ಮನವು
ವಸುಧೆ ದುರ್ಜನರ ಕಥೆ ಕೇಳುವುದೆ ಶ್ರವಣ
ಹಸನಾಗಿ ಎಣಿಸುವ ಹಣಹೊನ್ನಿನ ಜಪವು
ಬಿಸಿಲೊಳಗೆ ಸಂಚರಿಸುವುದೆ ಮಹಾಜಪವು ೨

ಪೀಠಪೂಜೆಂಬುವುದು ಲಾಜಚೂರಣವಯ್ಯ
ಮಾಟದ ಪಯೋಧರವೆ ಕಲಶಪೂಜೆ
ಜೂಟಿಯಲಿ ಉದರದ ಯಾತ್ರೆಯೇ ಮಹಾಯಾತ್ರೆ
ಬೂಟಕತನದಲ್ಲಿ ಅನೃತ ಪೇಳ್ವುದೆ ಮಂತ್ರ ೩

ಹೆಂಡತಿಯು ಕೊಂಡೆಯ ಮಾತುಗಳೆ ಉಪದೇಶ
ಚಂಡ ಕೋಪವೆಂಬೋದಗ್ನಿಹೋತ್ರ
ಪಂಡಿತನೆನಿಸುವುದೆ ಕುವಿದ್ಯ ಪಠನೆಗಳು
ಕಂಡಕಂಡಲ್ಲಿ ವಾದಿಸುವುದೆ ತರ್ಕ ೪

ಓದುವುದೆ ಎಲ್ಲಣ್ಣ ಕಲ್ಲಣ್ಣನೆಂಬುವುದು
ಸ್ವಾಧ್ಯಾಯವೆಂಬುವುದೆ ಪಗಡಿ ಪಂಜಿ
ಸಾಧಿಸಿ ಈ ಪರಿಯ ಧನವನ್ನು ಕೂಡ್ಯಾಕಿ
ಪೋದಿ ಶ್ರೀ ಹಯವದನ ನಾನಿನ್ನ ಮರತೆ ೫

೬೯ ರಾಗ ಅಸಾವೇರಿ ಆದಿತಾಳ

ಪ್ರಾಣನ ನೋಡಿರೈ ಮುಖ್ಯ ಪ್ರಾಣನ ಪಾಡಿರೈ ಪ

ಕ್ಷೋಣಿಯೊಳಗೆ ಎಣೆ ಬೀರುತ ಪಾವನ ಚರಿತ
ಸದ್ಗುಣಭರಿತ ಹೋಹೋ ೧

ಮರ್ಕಟ ಕುಲದಲಿ ಅವತರಿಸಿದ ಅಂಜನ ಸುತನೋ
ಮಹ ಅದ್ಭುತನೋ
ತರಣಿ ಮಂಡಲಕೆ ಮುಟ್ಟಿಹಾರಿದ ಬಲು ಪ್ರತಿಯೋ
ವಿಕ್ರಮ ಗತಿಯೊ
ಸುರರಾಯುಧ ನೆಗ್ಗಿಸಿದ ಕಪಿ ಅಗ್ರಣಿಯೋ
ವಜ್ರದ ಖಣಿಯೊ
ಶರಣವಂದಿತ ಚರಿತ ಮೂಲೋಕ ಗುರುವೊ
ಕಲ್ಪತರುವೊ ಹೋಹೋ ೧

ರಾಮಪದಾಂಬುಜ ಬಿಂಬಪರಾಗಮಧುಪನೋ
ದೇವಾಧಿಪನೊ
ತಾಮಸ ರಾವಣನೆದೆ ಗುದ್ದಿದ ಈ ಕರವೋ
ಸಿಡಿಲಬ್ಬರವೊ
ಪ್ರೇಮದಿ ರಣದೊಳಗ್ಹಾರಿ ರಥವನೊದ್ದ ಮಾರುತಿಯೊ
ಪೃಥ್ವಿ ಮೂರುತಿಯೊ
ರೋಮಕೆ ಸಿಲುಕದ ಹನುಮನ ಬಾಲದ ಸರಳೊ
ದೈತ್ಯರಿಗುರುಳೊ ಹೋಹೋ ೨

ಕ್ಷಣದೊಳು ಸಂಜೀವನ ಗಿರಿಯನೆ ತಂದ ತಪವೋ
ತಾ ನೃಪಹಿತವೊ
ವನಜನಾಭನ ಪದ ಪಿಡಿದಂಥ ಪದವೊ
ಸಾಗರ ಮದವೊ
ನೆನೆಯಲು ದುರಿತ ನಿವಾರಣ ಕರುಣವಾರಿಧಿಯೊ
ಭಕ್ತರ ಸುಧೆಯೊ
ಅನುದಿನದಲಿ ಹಯವದನನ ನೆನೆಯುವ ದಯವೋ
ಗತಿ ಆಶ್ರಯವೋ ಹೋಹೋ ೩

೪೦  ರಾಗ  ಆಠಾಣಾ  ಅಟತಾಳ

ಎಂಥಾ ಪಾವನ ಪಾದವೊ ರಂಗೈಯ ಇ
ನ್ನೆಂಥಾ ಚೆಲುವ ಪಾದವೊ  ಪ

ಎಂಥಾ ಪಾವನ ಪಾದ ಇಂತು ಜಗದಿ ಕೇಳು
ಪಂಥದೊಳಿಹ ಕುರುಪತಿಯನುರುಳಿಸಿದ  ಅ

ಹಲವು ಕಾಲಗಳಿಂದಲಿ-ಮಾರ್ಗದಿ
ಶಿಲೆ ಶಾಪ ಪಡೆದಿರಲು
ಒಲಿದು ರಜದಿ ಪಾವನಗೈದು ಕರುಣದಿ
ಶಿಲೆಯ ಬಾಲೆಯ ಮಾಡಿ ಸಲಹಿದ ಹರಿಯ  ೧

ಬಲಿಯ ದಾನವನೆಬೇಡಿ- ತ್ರೈಲೋಕವ
ನಳೆದು ಏಕಾಂಘ್ರಿಯಲಿ
ಛಳಿದು ಭೇದಿಸಲಾಗ ನಳಿನಜಾಂಡವು ಸೋಕೆ
ಚೆಲುವ ಗಂಗೆಯ ಪೆತ್ತ ಜಲಜಾಸನಾರ್ಚಿತ  ೨

ಚಂಡು ತರುವನೆವದಿ ಕಾಳಿಂಗ ನು
ದ್ದಂಡ ಮಡುವ ಧುಮುಕಿ
ಚಂಡ ಕಾಳಿಂಗನ ಮಂಡೆಯೊಳಗೆ ಪಾದ
ಪುಂಡರೀಕವ ನಿಟ್ಟು ತಾಂಡವವಾಡಿದ  ೩

ಸಂತತ ಸೌಖ್ಯವೆಂಬ ಕಾವೇರಿಯ
ಅಂತರಂಗದಿ ನೆಲೆಸಿ
ಸಂತೋಷದಿಂದ ಅನಂತನಮೇಲೆ ನಿ
ಶ್ಚಿಂತೆಯೊಳ್ ಲಕುಮಿ ಭೂಕಾಂತೇರು ಸೇವಿಪ  ೪

ಒಲಿದು ಗಯಾಸುರನ ಶಿರದೊಳಟ್ಟ
ಹಲವು ಭಕ್ತರ ಪೊರೆದ
ನೆಲೆಸಿ ಉಡುಪಿಲಿ ಎನ್ನ ಹೃದಯ ಕಮಲದಲ್ಲಿ
ತೊಲಗದೆ ಇರುತಿಪ್ಪ ಸುಭ ಹಯವದನನ  ೫

೪೧ ರಾಗ ಸುರುಟಿ ಝಂಪೆತಾಳ

ಆರಿಗೆ ಆರೋ ನಿನ್ನ ಉಳಿದು ಪೊರೆವರ ಕಾಣೆ ಪ

ಶೂರ ಮಾರಜನಕ ಅಕ್ರೂರ ವರದ ಧೊರೆಯೆ ಅ

ಸತಿಸುತರು ಹಿತರೇನೊ ಮತಿಭ್ರಾಂತಿ ಪಡಿಸುವರೊ
ಗತಿಯಾರನು ಕಾಣೆ ಗರುಡವಾಹನ ರಂಗ ೧

ಆಶಾಪಾಶದಿ ಸಿಲುಕಿ ಘಾಸಿಪಟ್ಟೆನೊ ಬಹಳ
ವಾಸುದೇವನೆ ನಿನ್ನ ದಾಸನೆಂದೆನಿಸೆನ್ನ ೨

ಮಾಯಾ ಮಡುವಿಲಿ ಬಿದ್ದು ಘಾಯವಾಯಿತೊ ಕಾಯ
ಉ-ಪಾಯವಾವುದು ಪೇಳೊ ರಾಯ ಹಯವದನ ೩

೪೨ ರಾಗ ಕಾಂಬೋದಿ ಝಂಪೆತಾಳ

ಗುರು ಹಿರಿಯರನುಸರಿಸಿ ಹರಿಯ ಮನದೊಳಗಿರಿಸಿ
ಪರಗತಿಯ ಬೇಗ ಸಾಧಿಸಿಕೊಳ್ಳಿರೋ ಪ

ಲೆಕ್ಕವಿಲ್ಲದ ದೇಹವೆಂಬ ಸೆರೆಮನೆಯೊಳಗೆ
ಸಿಕ್ಕಿ ಬಹುಕಾಲದಿಂ ಒಳಲುತಿಹಿರಿ
ರಕ್ಕಸಾರಿಯ ಭಕ್ತರೊಳು ಸೇರಿ ಸೆರೆಯಲ್ಲಿ
ಸಿಕ್ಕದಂತವನ ಮೊರೆ ಹೋಗಿರೈಯಾ ೧

ಕಂಬಳಿಯ ಬುತ್ತಿಯಂತೀ ದೇಹದೊಳಗೆ ಸುಖ
ವೆಂಬುದಿಲ್ಲವು ಎಲ್ಲ ದುಃಖಭರಿತ
ಅಂಬುಜಾಕ್ಷನ ದಿವ್ಯಮಂಗಳ ಕಥಾಮೃತವ
ನುಂಬ ಸಂಭ್ರಮಕೆ ನಾ ಸರಿಗಾಣೆನೈಯ ೨

ಮಕ್ಕಳುಗಳಳುವಾಗ ಮಡದಿಯರು ಜರಿವಾಗ
ಭಿಕ್ಷುಕರು ಬಂದೆಮ್ಮ ಬೈಯುವಾಗ
ಇಕ್ಕಿ ಪೊರೆವುದಕೆ ಗತಿಯಿಲ್ಲ ದಾರಿದ್ರರಿಗೆ
ಸೌಖ್ಯವೆತ್ತಣದೊ ಮನುಜಾನ್ನ ಭೋಕ್ತರಿಗೆ ೩

ತಾಯುಮಾರಿ ತೊತ್ತಕೊಂಬ ಪಾಮರನಂತೆ
ಹೇಯಕುಜನರ ಚರಣಗಳಿಗೆ ಎರಗಿ
ಶ್ರೀಯರಸನಂಘ್ರಿಗಳ ನೆನೆಯಲೊಲ್ಲದ ನರನ
ಆಯುಷ್ಯವು ಬರಿದೆ ಹೋಯಿತಲ್ಲಯ್ಯ ೪

ಐವರಿತ್ತೊಡನೆಯನು ಆವರವರು ಒಯ್ಯುವರು ಮ
ತ್ತೈವರೆಂಬುವರಲ್ಲೆ ತೊಲಗುವರು
ನೈಯ ಹತ್ತರಕೂಟ ಹರಿದು ಹೋಹುದು ನಮ್ಮ
ಕೈಯ ಪಿಡಿದೆತ್ತುವರ ನಾಕಾಣೆನೈಯ ೫

ಕಾಲ ಗುಂದಿದಮೇಲೆ ರೋಗ ರುಜಿನಗಳೆಂಬ
ಕಾಲನ ಭಟರುಗಳು ಬಂದು ಕವಿದು
ಸಾಲಾಗಿ ನಿಂತಾಗ ಮುಖ ಗಂಟಲುಗಳೊಳಗೆ
ನಾಲಗೆಗೆ ನಾದವೆಲ್ಲಿಂದ ಬಹುದಯ್ಯ ೬

ಈಗಲೇ ಹರಿನಾಮ ನಾದದಿಂಪೆಚ್ಚುತ್ತು
ನಾಗಶಯನನ ಮಹಾಪುರದ ಪಥವ
ಆಗಮಜ್ಞರಿಂದ ತಿಳಿದುಕೊಳ್ಳಿರೊ ನಿಮಗೆ
ಈ ಗಾಳಿಯ ದೀಪ ಸ್ಥಿರವಲ್ಲವಯ್ಯ ೭

ಜರೆಬಂದು ಕಷೆಯಲ್ಲಿ ಘುರುಘುರೆನಿಸಲು ತಮ್ಮ
ಶರೀರ ಸಂಬಂಧಿಗಳ ಹಲವು ಕಾಟ
ತರುಣಿಯರ ಮೇಲಾಸೆ ತಮ್ಮ ಹಿತವರಿಯದೆ
ನಿರಯದಲಿ ಬೀಳುವುದೆ ಫಲಸಿದ್ಧಿರ್ನೈಯ ೮

ವೇದವೋದಣವಿಲ್ಲ ಶಾಸ್ತ್ರ ಜಪ ಹೋಮಾದಿ
ಸಾಧು ಸತ್ಕರ್ಮಗಳ ಸರಕುಯಿಲ್ಲ
ಮಾಧವನ ಪೂಜಿಸಿ ಮೋದಪಟ್ಟದ್ದಿಲ್ಲ
ಪಾದದಲಿ ತೀರ್ಥಯಾತ್ರೆಗೆ ಪೋಗಲಿಲ್ಲ ೯

ಊರ್ಧ್ವ ಪುಂಡ್ರಗಳಿಲ್ಲ ಹರಿಯ ಲಾಂಛನವಿಲ್ಲ
ಪದ್ಮ ತುಲಸಿಯ ಸರಗಳ್ಹಾಕಲಿಲ್ಲ
ಸದ್ಧರ್ಮ ಪಥವೆತ್ತ ವಿಷಯಾಂಧ ಕೂಪದೊಳು
ಬಿದ್ದು ಮುಳುಗುವುದೆತ್ತ ಎಚ್ಚತ್ತಿರ್ಪೆಯ ೧೦

ಏಕಾದಶಿಯ ಮಾಡಿ ಯತಿಗಳೊಡನೆ ಆಡಿ
ಪೋಕವೃತ್ತಿಗಳೆಲ್ಲ ಈಡಯಾಡಿ
ಶ್ರೀಕಾಂತನನು ಬೇಡಿ ಸುಕೃತಿಗಳನೇ ಕೂಡಿ
ಆ ಕೃಷ್ಣ ನಂಘ್ರಿಗಳ ಅನುದಿನದಿ ಪಾಡಿ ೧೧

ಉಕ್ಕಿ ಹರಿಯಂ ಪೊಗಳಿ ಆವನಂಗಣದಿ ಹೊರಳಿ
ಶುಷ್ಕ ತರ್ಕಂಗಳ ಮೇಲೆ ಉಗುಳಿ
ಭಕ್ತಿ ಜ್ಞಾನಗಳಿರಲಿ ಮರ್ತ್ಯಪಥದಿಂ ಮರಳಿ
ಮುಕ್ತಿ ಮಾರ್ಗದಲಿನ್ನು ತೆರಳಿ ತೆರಳಿ ೧೨

ಕೊಳ್ಳೆನಾಯಕ ಬಂದು ಕೋಟೆ ಕೆಡಹದ ಮುನ್ನ
ಕಳ್ಳರೈವರ ಕಪಟ ಕಾಟದಿಂದ
ಉಳ್ಳ ಪುಣ್ಯಾರ್ಥಗಳು ಕೊಳ್ಳೆಹೋಗದ ಮುನ್ನ
ಫುಲ್ಲನಾಭನ ಬೇಗ ಮೊರೆಹೋಗಿರ್ಪೆಯ ೧೩

ಮಲಮೂತ್ರ ರಕ್ತ ಮಾಂಸದ ಭರಣದಲಿ ಮತ್ತೆ
ಎಲುವಿನ ಬಲದಲ್ಲಿ ಗೂಡು ಮಾಡಿ
ಬೆಳೆಸಿದೀ ತನುವೆಂಬ ನರಕದಾಸೆಯ ಬಿಟ್ಟು
ಜಲಜನಾಭನ ಪಾದವನು ಸೇರಿರ್ಪೆಯ ೧೪

ಒಂಬತ್ತು ಛಿದ್ರವಾಗಿಹ ದೇಹ ಭಾಂಡದೊಳು
ತುಂಬಿತ್ತು ವಾಯುತಾ ಸ್ಥಿರವಲ್ಲವು
ನಂಬಿ ನೆಚ್ಚಿರಬೇಡ ಹಯವದನ ಹರಿಯ ಪಾ
ದಾಂಬುಜಂಗಳ ಬಿಡದೆ ನೇರಿ ಬದುಕಿರ್ಪೆಯ ೧೫

## ೪೩ ರಾಗ ಸಾವೇರಿ ಝಂಪೆತಾಳ

ದಿನಗಳನು ಕಳೆವ ಜನರೇ ಸುಜನರು ಪ

ವನಜನಾಭನ ದಾಸ ಜನ ಸಮಾಗಮದಿಂದ ಅ

ಅರುಣೋದಯದಲೆದ್ದು ಆಚಮನ ಕೃತ್ಯದಲಿ
ಪರಿಶುದ್ಧರಾಗಿ ಇಹಪರಗಳಿಂದ
ಎರಡು ವಿಧ ಸುಖವೀವ ಗುರುಮಧ್ವ ಮುನಿವರರ
ಪರಮಮತ ಪಿಡಿದು ಹರಿ ಚರಿತಾಮೃತವ ಸವಿದು ೧

ಸ್ನಾನವನು ಮಾಡಿ ಸಂಕಲ್ಪ ಪೂರ್ವಕದಿ ಸಂ
ಧ್ಯಾನ ಗಾಯಿತ್ರಿ ಗುರುಮಂತ್ರ ಜಪಿಸಿ
ಭಾನುಗರ್ಘ್ಯವನಿತ್ತು ಪರಮಾತ್ಮ ನಂಘ್ರಿಗಳ
ಧ್ಯಾನವನು ಮಾಡಿ ಅಧ್ಯಯನ ಪಾಠಗಳಿಂದ ೨

ಶ್ರೀ ವಾಸುದೇವನ ಅಡಿಗಡಿಗೆ ನೆನೆನೆನೆದು
ಪಾವಕಗೆ ಪ್ರಾತರಾಹುತಿಯನಿತ್ತು
ಭಾವಜ್ಞರಲಿ ಸಕಲ ಪೌರಾಣಗಳ ಕೇಳಿ
ಹೂವು ಶ್ರೀತುಳಸಿ ವನಗಳನು ಸೇವಿಸುತ ೩

ಸಾವಧಾನದಿ ತಂತ್ರ ಸಾರೋಕ್ತ ವಿಧಿಯಿಂದ
ದೇವ ಪೂಜೆಯಮಾಡಿ ದೇವೇಶಗೆ
ನೈವೇದ್ಯಗಳನಿತ್ತು ನಿತ್ಯ ತೃಪ್ತಗೆ ವೈಶ್ವ
ದೇವ ಬಲಿಹರಣ ಅತಿಥಿಯ ಪೂಜೆ ಮಾಡುತ್ತ ೪

ಪರಮ ಹರುಷದಿಂದ ದೇವ ಪ್ರಸಾದವನು
ವರಮಾತೃ ಪಿತೃ ಸೋದರರು ಸಹಿತ
ಪರಮ ಸೌಖ್ಯದಿ ಪಙ್ಕ್ತಿ ಪಾವನರ ಒಡಗೂಡಿ
ನರಹರೇ ಎನುತ ಭೋಜನಮಾಡಿ ಮುದದಿಂದ ೫

ಸಾಯಾಹ್ನ ಸಮಯ ಸಂಧ್ಯಾನ ಗಾಯಿತ್ರಿ ಜಪ
ಶ್ರೀಯರಸ ನಂಘ್ರಿಗಳ ಪೂಜೆಯನು ಮಾಡಿ
ವಾಯುಸಖ ಮುಖದಲಾಹುತಿಯುತ್ತ ಲಕ್ಷ್ಮೀನಾ
ರಾಯಣನ ಗಾಯನದಿ ಕೊಂಡಾಡಿ ಪೊಗಳುತ್ತ ೩

ಈ ವಿಧವಿ ದಿನಗಳನು ಕಳೆದು ರಾತ್ರಿಯಲೊಂದು
ಝಾವದನಂತರ ಸುಖದಿ ಮಲಗಿ
ಝಾವರುಝಾವದೊಳೆದ್ದು ನೆರೆಹೊರೆಯು ಕೇಳ್ವಂತೆ
ಪಾವನ್ನ ಚರಿತ ಹಯವದನನ್ನ ಸ್ಮರಿಸುತ್ತ ೪

೪೪ **ರಾಗ ಮಾಂಜಿ (ಭೈರವಿ) ಅಟತಾಳ**

ಎನ್ನಾಣೆ ಬೇಡ ಬೇಡವೊ ರಂಗ ನಿನಗಿನ್ನು
ಚೆನ್ನಗಿತ್ತೀರಮನೆ-ಗೋವಿಂದ
ಚೆನ್ನಗಿತ್ತೀರಮನೆ ಪ

ನಿನ್ನಯ ಬಿನ್ನಾಣ ಪೇಳುತಲೈದಾರೆ
ಚಿಣ್ಣ ನೀ ಪೋಗಬೇಡ
ಗೋವಿಂದ-ಚಿಣ್ಣ ನೀ ಪೋಗಬೇಡ ಅ

ಗೋಪೇರ ಮನೆಗಳ ಪೊಕ್ಕು ನೀನೀಪರಿ
ಲೂಟಿ ಮಾಡುವರೆ ಕಂದ-ಗೋವಿಂದ
ಲೂಟಿ ಮಾಡುವರೆ ಕಂದ

ಕ-ಪಟಿ ಶಟವೇರ ಚಾಡಿ ಮಾತನು ಕೇಳಿ
ಕೋಪಿಸಬೇಡವಮ್ಮ-ಗೋಪೆಮ್ಮ
ಕೋಪಿಸಬೇಡವಮ್ಮ ೧

ಮಲಗಿದ್ದ ತುರುಗಳೆಬ್ಬಿಸಿ ಕರುಗಳ ಬಿಟ್ಟು
ದುರುಳ ತನವ ಮಾಡೋರೆ-ಮುರಾರೆ
ದುರುಳ ತನವ ಮಾಡೋರೆ

ಮಲಗಿದ್ದ ಮಕ್ಕಳೆದ್ದಳುವ ಗುಲ್ಲುಗಳಿಂದ
ತುರುಕರು ಬೆದರಿತಮ್ಮಾ-ಗೋಪೆಮ್ಮ
ತುರುಕರು ಬೆದರಿತಮ್ಮಾ ೨

ದಧಿ ದುಗ್ಧ ಭಾಂಡಗಳೊಡೆದು ಗೋಪೇರ ಕಂಡು
ಬೆದರಿಕೆ ಮಾಡುವರೇ-ಗೋಪಾಲಾ
ಬೆದರಿಕೆ ಮಾಡುವರೇ

ಉದಯದಿ ಗುದ್ದಾಡ್ಯಡಿ ಮಾರ್ಜಾಲಂಗಳು ಬೀಳೆ
ದಧಿಭಾಂಡ ಒಡೆಯಿತಮ್ಮಾ-ಗೋಪೆಮ್ಮಾ
ದಧಿಭಾಂಡ ಒಡೆಯಿತಮ್ಮಾ ೩

ಬಿಸವನೊಳಾಟವೆ ಶಿಶುಗಳೆಲ್ಲರ ಕೂಡಿ
ಮಸಿಮಣ್ಣು ಮೈಯಾದವೋ-ಗೋವಿಂದ
ಮಸಿಮಣ್ಣು ಮೈಯಾದವೋ

ಶಶಿಮುಖಿಯರು ಮನೆಮುಸುರೆ ಕೆಲಸಮಾಡಿ
ಮಸಿಕೈಯನೊರೆಸಿದರೆ-ಗೋಪೆಮ್ಮ
ಮಸಿಕೈಯನೊರೆಸಿದರೆ ೪

ಎನ್ನಯ್ಯ ನೋಡೋ ಈ ಹೆಣ್ಣುಗಳೆಲ್ಲರು
ನಿನ್ನ ದೂರುತಲೈದಾರೆ-ಗೋವಿಂದ
ನಿನ್ನ ದೂರುತಲೈದಾರೆ

ಕನ್ನೇರು ಕೊಬ್ಬಿಂದ ಅನ್ಯಾಯ ನುಡಿದರೆ
ಇನ್ನೇನು ಮಾಡಲಮ್ಮ-ಗೋಪೆಮ್ಮ
ಇನ್ನೇನು ಮಾಡಲಮ್ಮ ೫

ಅಣ್ಣಯ್ಯ ಬಲರಾಮ ಬನ್ನಣೆ ಬುದ್ಧಿಯ
ಚೆನ್ನಾಗಿ ಪೇಳಿದನೋ-ಗೋವಿಂದ
ಚೆನ್ನಾಗಿ ಪೇಳಿದನೋ

ಉನ್ನಂತ ದಾಯಾದಿಯು ಮಾತುಗಳ ಕೇಳಿ
ಮನ್ನಿಸಬೇಡವಮ್ಮ-ಗೋಪೆಮ್ಮಾ
ಮನ್ನಿಸಬೇಡವಮ್ಮಾ ೬

ಬಾರೆನ್ನ ಚಿನ್ನವೆ ಬಾರೆನ್ನ ರನ್ನವೆ
ಬಾರೊ ಮೋಹದ ಖಣಿಯೆ-ಕೃಷ್ಣಯ್ಯ
ಬಾರೊ ಮೋಹದ ಖಣಿಯೆ

ಬಾರೆಂದು ಯಶೋದೆ ಕರೆದಳು ಬಿಗಿದಪ್ಪಿ
ಧೀರ ಹಯವದನನ್ನ-ಗೋಪೆಮ್ಮ
ಧೀರ ಹಯವದನನ್ನ ೭

### ೪೫ ರಾಗ ಕಲ್ಯಾಣಿ ಅಟತಾಳ

ಬಿಡೆನು ಬಿಡೆನು ನಿನ್ನ ಚರಣ ಕಮಲವ, ಎನ್ನ ಪ
ಹೃದಯ ಮಧ್ಯದೊಳಿಟ್ಟು ಭಜಿಸುವೆ ಅನುದಿನ ಅ

ಬಲಿಯು ದಾನವ ಬೇಡಿ ಅಳೆಯೆ ಬ್ರಹ್ಮಾಂಡವ
ನಳಿನೋದ್ಭವ ಬಂದು ಪಾದವ ತೊಳೆಯೆ
ಉಗುರಿನ ಕೊನೆಯಿಂದ ಉದಿಸಿದಳಾಗಂಗೆ
ಹರಪಾದ ತೀರ್ಥವೆಂದು ಹರ ಧರಿಸಿದನಾಗ

ಆ ಪತಿಶಾಪದಿ ಅಹಲ್ಯೆ ಸಾಸಿರಯುಗ
ಪಾಷಾಣವಾಗುತ್ತ ಪಥದೊಳಗಿರಲು
ಶ್ರೀಪತಿ ನಿನ್ನಯ ಶ್ರೀಪಾದ ಸೋಕಲು
ಪಾಪ ರಹಿತಳಾಗಿ ಪದವಿ ಕಂಡಳಾಗ ೨

ವಜ್ರಾಂಕುಶ ಧ್ವಜಪದುಮ ರೇಖೆಗಳಿಂದ
ಪ್ರಜ್ವಲಿಸುವ ನಿನ್ನ ಪಾದ ಪದ್ಮವನು
ಘರ್ಜಿಸಿ ಭಜಿಸುವೆ ಹಯವದನನೆ ಭವ
ಜರ್ಜರ ಬಿಡಿಸುವನೆಂದು ನಂಬಿಹೆನಾಗಿ ೩

೪೭ ರಾಗ ಭೈರವಿ ಅಟತಾಳ

ಭೀಮಸೇನ ಕಾಮಿನಿಯಾದನು ಪ

ಭೀಮಸೇನ ಕಾಮಿನಿಯಾಗಲು
ಪ್ರೇಮದ ಸತಿಯು ಕಾಮಿಸಿದವನ
ಘೂಮರಾತ್ರಿಗೆ ಸೀಳುವೆನೆನ್ನುತ
ಸಾಮಜ ವರದನ ಪಾಡುತಲಿ ಅ

ರಾಜಾಧಿರಾಜನು ಗಜಪುರದಲ್ಲಿ
ಜೂಜನಾಡಿ ತಮ್ಮ ರಾಜ್ಯವನು ಸೋತು
ವಿಜಯ ಮುಖ್ಯಾನುಜರ ಒಡಗೂಡಿ
ಭುಜಗಶಾಯಿಯ ಭಜಿಸುತ

ಸೂಜಿಮೊನೆಯಷ್ಟು ಗೋಜಿಲ್ಲದೆ ಜೇರೆ
ವ್ಯಾಜದಿಂದ ರೂಪ ಮಾಜಿಗೊಂಡು ಪೋಗೆ
ರಾಜ ಮತ್ಸ್ಯನೊಳು ಭೋಜನಮಾಡುತ
ಪೂಜಿಸಿಕೊಂಬುದು ಸೋಜಿಗವು ೧

ಮಾನಿನಿ ದ್ರೌಪದಿ ಶ್ರೇಣಿಲಿ ಬರುತಿರೆ
ತ್ರಾಣಿ ವಿರಾಟನ ರಾಣಿಯು ಕಾಣುತ
ಧ್ಯಾನಿಸಿ ಯಾರೆಂದು ಮನ್ನಿಸಿ ಕೇಳಲು
ಮುನ್ನಿನ ಸಂಗತಿ ಪೇಳಿದಳು

ಆಣಿ ಮುತ್ತಿನಂಥ ವಾಣಿಯ ಕೇಳಲು
ಕ್ಷೋಣಿಲಿ ನಿನ್ನಂಥ ಜಾಣೆಯ ಕಾಣೆನು
ಪ್ರಾಣಿ ನೀ ಎನಗೆ ವೇಣಿ ಹಾಕೆನ್ನುತ
ಪಾಣಿ ಹಿಡಿದು ಕರೆತಂದಳಾಗ ೨

ಈಶಕೇಳೊ ಪರದೇಶದಿಂದೊಬ್ಬಳು
ಕೇಶಕಟ್ಟುವಂಥ ವೇಷದಿ ಬಂದಳು

ಸಾಸಿರ ಮುಖದ ಶೇಷನೀರೂಪವ
ಲೇಸಾಗಿ ತಾ ವರ್ಣಿಸಲಾರ

ವಾಸಮಾಡುವೆನು ಮಾಸ ಈರಾರೆಂದು
ಗ್ರಾಸವ ಕೊಟ್ಟೆನ್ನ ಪೋಷಿಸೆಂದ ನುಡಿ-
ದೋಸನು ಪೇಳಲು ಮೀಸೆಯ ತಿರುಹುತ್ತ
ಮೀಸಲೆನಗೆಂದು ತೋಷಿಸಿದ ೩

ನಾರಿ ಅಕ್ಕನಲ್ಲಿ ಸೇರಿಕೊಂಡಿಹಳು
ಮೋರೆಯ ನೋಡಲು ಭಾರಿ ಗುಣದಂತೆ
ತೋರುತಲಿದೆ ಎನ್ನ ಸೇರಿದ ಮೇಲನು
ಚಾರಿ ಎನಿಸುವೆ ಮೀರಿದ್ದಕ್ಕೆ

ವಾರೆಗಣ್ಣಿಲೊಂದು ಸಾರಿ ನೋಡಲೆಂದು
ಬಾರಿಬಾರಿಯಾಕೆ ಮೋರೆ ನೋಡುತ್ತಿರೆ
ನೀರೆ ಆ ಕ್ರೂರನ ಘೋರರೂಪಕ್ಕಂಜಿ
ಮೋರೆ ತೋರದೆ ಗಂಭೀರದಿರೆ ೪

ಅಕ್ಕನಿಗೆ ಬಾಚಿ ಹಿಕ್ಕುವ ಸೇವೆಗೆ
ಪುಕ್ಕಟೆ ಅನ್ನಕ್ಕೆ ಸಿಕ್ಕುವರೇ ನೀನು
ಚಿಕ್ಕ ಪ್ರಾಯಕ್ಕೆನ್ನ ಪಕ್ಕಕ್ಕೆ ಬಂದರೆ
ಸಕ್ಕರೆ ತುಟಿ ಸವಿದಕ್ಕಿಸುವೆ

ರಕ್ಕಸ ನಿನಗೇ ದಕ್ಕುವಳೇ ನಾನು
ಮುಕ್ಕಣ್ಣನಾದರು ಲೆಕ್ಕಿಸದ ಪತಿ
ಘಕ್ಕನೆ ಬಂದರೆ ತಿಕ್ಕಿ ನಿನ್ನ ಕಾಯ
ದಿಕ್ಕು ದಿಕ್ಕಿಗೆ ಬಲಿ ಮುಕ್ಕುವರೊ ೫

ಭಂಡ ಕೀಚಕ ಎನ್ನುದ್ದಂಡತನ ಕೇಳು
ಮಂಡೆ ಹಿಕ್ಕುವಳೆಂದು ಕಂಡ ಕಂಡ ಬಳಿ

ಪುಂಡು ಮಾಡುವರೆ ಗಂಡರ್ಕಂಡರೆ ತಲೆ
ಚಂಡನಾಡುವರೊ ಖಂಡಿತದಿ

ಮಂಡಲಾಧಿಪನ ಹೆಂಡತಿ ನೀ ನಮ್ಮ
ಉಂಡಮನೆಗೆ ಹಗೆ ಗೊಂಡಳೆನ್ನದಿರು
ಲಂಡನಿಗೆ ಬುದ್ಧಿದಂಡಿಸಿ ಪೇಳದೆ
ಹಿಂಡಿಕೊಳ್ಳದಿರು ದುಂಡು ಮುಖ ೬

ತರಳ ನಿನ್ನಯ ದುರುಳ ತನದ
ಬೆರಳ ಸನ್ನೆಯು ಗರಳವಾಯಿತು
ಸರಳ ಸೂರೆಗೆ ಕೊರಳ ಕೊಡದಲೀ
ಪುರದೊಳಿರದೆ ತೆರಳಿನ್ನು

ಅರಳ ಮೊಗ್ಗೆಯ ಹೆರಳಿಗ್ಹಾಕುತ
ಕುರುಳು ತಿದ್ದುವ ತರಳೆಯ ಕಂಡು
ಇರುಳು ಹಗಲು ಬಾರಳು ಎನ್ನುತ
ಮರಳುಗೊಂಡರೆ ಬರುವಳೇ ೭

ನಿಷ್ಠೆ ಸೈರಂಧ್ರಿಯ ದೃಷ್ಟಿಸಿ ನೋಡಲು
ನಷ್ಟವಾಗುವುದು ಅಷ್ಟೈಶ್ವರ್ಯವು
ಭ್ರಷ್ಟ ನಿನಗೆ ನಾನೆಷ್ಟು ಪೇಳಲಿನ್ನು
ಕಟ್ಟಕಡೆಗೆ ನೀಕೆಟ್ಟೆ ಕಂಡ್ಯ

ಸೃಷ್ಟಿಲಿ ನನ್ನಂಥ ಗಟ್ಟಿಗನ್ಯಾರಕ್ಕ
ದುಷ್ಟರೆದೆಯನು ಮೆಟ್ಟಿ ಸೀಳುವನು
ಗುಟ್ಟಿಂದ ನಾರಿಯು ಕೊಟ್ಟು ಕಳುಹಲು
ಪಟ್ಟದ ರಾಣಿಯೋಲಿಟ್ಟು ಕೊಂಬೆ ೮

ಕೀಚಕನಾಡಿದ ನೀಚನುಡಿ ಕೇಳಿ
ನಾಚಿ ಪತಿಯೊಳು ಸೂಚಿಸಬೇಕೆಂದು

ಯೋಚಿಸಿ ಸುಮ್ಮನೆ ಈಪೆ ಬರುತಿರೆ ನಿ
ಶಾಚರ ಕರವ ಚಾಚಿದನು

ಬಾಚಿ ಹಿಕ್ಕುವಂಥ ಪ್ರಾಚೀನವೇನಿದು
ವಾಚಪಾಡು ಮೀನಲೋಚನೆ ಎನ್ನಲು
ಆಚರಿಸಿ ಮುಂದು ತೋಚದೆ ಖಳನ
ವಿಚಾರಿಸಿಕೋ ಶ್ರೀ ಚಕ್ರಪಾಣಿ ೯

ಪೊಡವಿಪತಿಗಳ ಮಡದಿ ನಾನಾಗಿ
ಬಡತನವು ಬಂದು ಒಡಲಿಗಿಲ್ಲದೆ
ನಾಡ ಧೊರೆಗಳ ಬೇಡುವುದಾಯಿತು
ಮಾಡುವುದೇನೆಂದು ನುಡಿದಳು

ಕೇಡಿಗ ಕೀಚಕಮಾಡಿದ ಚೇಷ್ಟೆಗೆ
ಕಡಲ ಶಾಯಿ ಕಾಪಾಡಬೇಕೆನ್ನನು
ಆಡಲಂಜಿಕೇನು ಷಡುರಸಾನ್ನದ
ಅಡುಗೆ ರುಚಿಯು ನೋಡುವರೆ ೧೦

ನಡುಗುವ ಧ್ವನಿಯುಲಿ ಬಿಡುತ ಕಣ್ಣೀರನು
ಆಡಿದ ಮಾತನು ಬಾಡಿದ ಮುಖವನು
ನೋಡಿದನಾಕ್ಷಣ ತೊಡೆದು ನೇತ್ರವ
ಬಿಡುಬಿಡು ದುಃಖ ಮಾಡದಿರು

ಮಿಡುಕಿ ನಿನ್ನನು ಹಿಡಿದ ಖಳನನು
ಬಡಿದು ಯಮನಿಗೆ ಕೊಡುವೆ ನೋಡೀಗ
ತಡವಮಾಡದೆ ಗಾಡದಿಪೋಗು ನೀ
ಮಾಡಿದ ಚಿಂತೆ ಕೈಗೂಡಿತೆಂದು ೧೧

ಮೋಸಮಾಡಿ ಪೋದಳಾ ಶಶಿಮುಖಿ ಯೆಂ
ದಾಸೆಬಿಡದೆ ತಾ ವ್ಯಸನಗೊಳ್ಳುತ

ಪೂಶರ ತಾಪಕ್ಕೆ ಕೇಸರಿ ಗಂಧವ
ಪಾಸಿಯರಿಂದ ಪೂಸಿಕೊಂಡು

ಹಾಸು ಮಂಚದಲ್ಲಿ ಬೀಸಿಕೊಳುತಲಿ
ಘಾಸಿ ಪಡುತ್ತಿರೆ ಆ ಸಮಯದಲ್ಲಿ
ಲೇಸಾಗಿ ನಿನ್ನಭಿಲಾಷೆ ಸಲ್ಲಿಸುವೆ
ಈಸು ಸಂಶಯಬೇಡ ಭಾಷೆಕೊಟ್ಟೆ ೧೨

ನಳಿನ ಮುಖಿಯಿಂತು ಪೇಳಿದ ಮಾತನು
ಕೇಳಿ ಹರುಷವನು ತಾಳಿದನಾಕ್ಷಣ
ಖಳನು ಹೊನ್ನಿನ ಜಾಳಿಗೆ ಕೊಟ್ಟ-
ನ್ನಳಿಯದಲೆ ರತಿ ಕೇಳಿಗಾಗಿ

ಕಾಳಗದ ಮನೆಯೊಳಗೆ ಬಾರೆಂದು
ಪೇಳಿದ ಸುಳುಹನು ಪೇಳಲು ಭೀಮಗೆ
ಖೂಳನ ಕಾಯವ ಸೀಳಲು ತಕ್ಕಂಥ
ವೇಳೆ ಬಂತೆನುತ ತೋಳ ಹೊಯ್ದ ೧೩

ನಾರಿಯಿನ್ನಾವಾಗ ಬರುವಳೊ ಎಂದು
ದಾರಿಯ ನೋಡುವ ಜೋರ ಕೀಚಕನು
ತೋರಿದ ಠಾವಿಲಿ ಸೇರುವಬೇಗನೆ
ಊರೊಳಗಾರೂ ಅರಿಯದಂತೆ

ಕ್ರೂರನು ಮೋಹಿಪ ತೆರದಲೆನಗೆ
ನಾರಿಯರೂಪ ಶೃಂಗಾರಿಸು ನೀನೆಂದು
ವಾರಿಜ ಮುಖಿಯಳ ಮೋರೆಯನೋಡಲು
ನೀರೆ ದ್ರೌಪದಿ ತಾನಾಚಿದಳು ೧೪

ಬಟ್ಟಮುಖಕೆ ತಾನಿಟ್ಟಳು ಸಾದಿನ
ಬಟ್ಟನು ಪಣೆಯೊಳು ಇಟ್ಟು ಕಣ್ಣು ಕಪ್ಪು

ಪಟ್ಟೆ ಪೀತಾಂಬರ ಉಟ್ಟುಕೊ ನೀನೆಂದು
ಪುಟ್ಟಾಣಿ ಕುಪ್ಪುಸ ಕೊಟ್ಟಳಾಗ

ಕಟ್ಟಾಣಿ ಮುತ್ತನು ಕಟ್ಟಿತಾ ಕೊರಳಿಗೆ
ಘಟ್ಯಾಗಿ ಚಿನ್ನದ ಪಟ್ಟೆ ಉಡುದಾರ
ಧಿಟ್ಟನ ಬೆರಳಿಗೆ ಇಟ್ಟಳು ಉಂಗುರ
ವಿಟ್ಟರ ದೃಷ್ಟಿಯು ತಾಕುವಂತೆ ೧೫

ಮುತ್ತಿನ ಮೂಗುತಿ ಕೆತ್ತಿದ ವಾಲೆಯು
ಇತ್ತೆರಬುಗುಡಿಯು ನೆತ್ತಿಗೆ ಅರಳೆಲೆ
ಚಿತ್ರದ ಬ್ಯಾಗಟೆ ಉತ್ತಮಕ್ಯಾದಿಗೆ
ವತ್ತಿಲಿ ಶ್ಯಾವಂತಿಗೂವು ಗೊಂಡ್ಯ

ಹಸ್ತ ಕಡಗವು ಮತ್ತೆ ಜೂಡ್ಯವಂಕಿ
ಮುತ್ತಿನಹಾರವು ರತ್ನದ ಪದಕವು
ಅರ್ಥಿಲಿ ನಾರಿಯು ಕುತ್ತಿಗ್ಯೆ ಹಾಕಲು
ಹಸ್ತಿನಿಯೋ ಈಕೆ ಚಿತ್ತಿನಿಯೊ ೧೬

ಮುಡಿಗೆ ಮಲ್ಲಿಗೆ ಮುಡಿಸಿ ಸುಗಂಧ
ತೊಡೆದು ತಾಂಬೂಲ ಮಡಿಸಿ ಕೊಡುತಲಿ
ಪ್ರೌಢನ ಸ್ತ್ರೀರೂಪನೋಡಲು ಖೂಳನು
ಕೂಡದೆ ಪ್ರಾಣವ ಬಿಡನೆಂದಳು

ಮಾಡಿದ್ಯೋಜನೆ ಕೈಗೂಡಿತು ಇಂದಿಗೆ
ನೋಡು ಆ ಕೃಷ್ಣನು ಹೂಡಿದ ಆಟವ
ಮಡದಿ ನೀನೆನ್ನ ಒಡನೆಬಾರೆಂದು
ನಡೆದನಾಖಳನ ಬಿಡಾರಕೆ ೧೭

ಇಂದುಮುಖಿಯು ಅರವಿಂದನಯನದ
ಮಂದಗಮನೆಯು ಬಂದಳು ಎನ್ನುತ

ನಂದನ ತನಯನ ಕಂದನ ಬಾಧೆಗೆ
ಕಂದಿ ಕುಂದಿ ಬಹುನೊಂದೆನೆಂದ

ಹಿಂದಿನ ಸುಕೃತದಿಂದಲಿ ನಿನ್ನೊಳಾ
ನಂದವಾಗಿಹುದು ಇಂದಿಗೆ ಕೂಡಿತು
ಕಂದಣದಾಭರಣ ತಂದೆ ನಿನಗಾಗಿ
ಚಂದದಿಟ್ಟು ನೀನೆಂದವಾಗೆ ೧೮

ಗುಲ್ಲು ಮಾಡದಿರೊ ಮೆಲ್ಲನೆ ಮಾತಾಡೊ
ವಲ್ಲಭರ್ಕಂಡರೆ ಹಲ್ಲು ಮುರಿವರೊ
ಬಲ್ಲವ ನಿನಗೆ ಸಲ್ಲದು ಈ ಕಾರ್ಯ
ಗೆಲ್ಲಲರಿಯೆ ಕೊಲ್ಲಿಸಿಕೊಂಬೆ

ಚೆಲ್ವೆ ಕೇಳು ನಿನ್ನ ಹುಲ್ಲೆಗಣ್ಣ ನೋಟ
ಕೊಲ್ವ ಬಗೆಗೆ ನಾ ಗೆಲ್ಲಲಾರೆನೆಂದು
ಗಲ್ಲ ಮುದ್ದಿಟ್ಟು ಮೈಯೆಲ್ಲವ ಹುಡುಕಲು
ಕಲ್ಲೆದೆಯಲ್ಲಿರೆ ಖುಲ್ಲನೊಂದ ೧೯

ನಾರಿಯೊ ನೀನೇನು ಮಾರಿಯೊ ಇನ್ನೊಂದು
ಜಾರಿ ಎನಗೆ ನಿನ್ನ ಮೋರೆ ತೋರಿಸೆಂದು
ಧೀರನ ಸಮೀಪ ಬಾರದೆ ಓಡುವ
ನಾರಿಯುನೋಡುತ್ತಲಿರಲಾಗ

ಬಾರದಂಥ ಪರನಾರೇರ ಮೋಹಿಪ
ಕ್ರೂರಗೆ ಈ ರೂಪ ಘೋರವಾಗಿಹುದು
ಸಾರದ ಮಾತಿದು ಯಾರಾದರೇನೀಗ
ಮಾರನತಾಪವ ಹಾರಿಸುವೆ ೨೦

ಶುದ್ಧ ಹೆಣ್ಣೆಂದು ಪ್ರಸಿದ್ಧವಾಗಿದೆ ಎನ್ನ
ವಿದ್ಯವನಿನಗೀ ಸದ್ಯಕ್ಕೆ ತೋರುವೆ
ನಿದ್ರೆಕೆಡುವಂಥ ಬುದ್ಧಿಯು ನಿನ್ನದು
ಸದ್ದು ಮಾಡದೆ ಮುದ್ದಿಸೆನ್ನ

ಬದ್ಧವೆಂತೆಂದು ವದ್ದಿಗೆ ಪೋಗಲು
ಎದ್ದು ಸವಿರಾರಜ ಗುದ್ದಲು ಕೀಚಕ
ಬಿದ್ದನು ಭೂಮಿಲಿ ಗೆದ್ದೆನೆನುತ ಆನಿ
ರುದ್ಧನ ಸ್ಮರಿಸುತಲೆದ್ದ ಭೀಮ     ೨೮

ಕೆಟ್ಟ ಕೀಚಕತಾ ಕೊಟ್ಟ ಲಾಂಛನವಿ
ಬಿಟ್ಟದಂಥ ದೇಹ ಬಿಟ್ಟ ನಿನ್ನವನ
ಪಟ್ಟಾಗಿ ತೋರುವೆ ದೃಷ್ಟಿಸು ಎನ್ನಲು
ಭ್ರಷ್ಟನ ನೋಡುವುದೇನೆಂದಳು

ಕೊಟ್ಟ ಭಾಷೆಯು ಈಗ ಮುಟ್ಟಿತು ನಿನಗೆ
ಕೃಷ್ಣನ ದಯದೀ ಕಷ್ಟವು ಹಿಂಗಿತು
ಪಟ್ಟಣಕೀಸುದ್ದಿ ಮುಟ್ಟದ ಮುಂಚೆಯೆ
ಗುಟ್ಟಲಿ ಪೋಗುವೆ ಥಟ್ಟನೆಂದ     ೨೨

ಅರಸಿನಿನ್ನೊಳು ಸರಸಬೇಕೆಂದ
ಪುರುಷನ ಜೀವದೊರಸೆ ಕೊಂದೆನು
ಹರುಷದೀಪುರದ ಅರಸು ಎಮ್ಮನು
ಇರಿಸಿಕೊಂಡೊಂದು ವರುಷವಾಯ್ತು

ಬೆರೆಸಿದ ಸ್ನೇಹಕ್ಕೆ ವಿರಸ ಬಂತೆಂದು
ಸರಸಿಜಾಕ್ಷಿಯು ಕರೆಸಿ ನಿನ್ನೊಳ
ಗಿರಿಸದಿರೆ ಹಯವದನನ ಪದಪದ್ಮ
ಸ್ಮರಿಸುತ ಗದೆಯನು ಧರಿಸುವೆನು     ೨೩

೪೭ ರಾಗ ಮೋಹನ ಆದಿತಾಳ

ಆವ ಕುಲವೆಂದರಿಯಬಾರದು ಪ

ಆವ ಕುಲವೆಂದರಿಯಬಾರದು
ಗೋವು ಕಾವ ಗೊಲ್ಲನಂತೆ
ದೇವ ಲೋಕದ ಪಾರಿಜಾತದ
ಹೂವ ಸತಿಗೆ ತಂದನಂತೆ ಅ

ಗೋಕುಲದಲ್ಲಿ ಪುಟ್ಟಿದನಂತೆ
ಗೋವ್ಗಳನ್ನು ಕಾಯ್ದನಂತೆ
ತಾ ಕೊಳಲೂದಿ ಮೃಗ ಪಕ್ಷಿಗಳಾ
ನೀಕ ಮರುಳು ಮಾಡಿದನಂತೆ ೧

ತರಳತನದಿ ಒರಳನೆಗಹಿ
ಮರವ ಮುರಿದು ಮತ್ತೆಹಾರಿ
ತೆರೆದ ಬಾಯೊಳಗೀರೇಳು ಲೋಕವ
ನಿರಿಸಿ ತಾಯಿಗೆ ತೋರ್ದನಂತೆ ೨

ಕಾಲಿಲಿ ಶಕಟನ ಒದ್ದನಂತೆ
ಗೂಳಿಯ ಕೊಂಬು ಕಿತ್ತನಂತೆ
ಕಾಳಿಂಗಸರ್ಪನ ಫಣವ ತುಳಿದು
ಬಾಲಿಕೆಯರಿಗೆ ಒಲಿದನಂತೆ ೩

ಗೊಲ್ಲತೆಯರ ಮನೆಯಪೊಕ್ಕು
ಕಳ್ಳತನವ ಮಾಡಿದನಂತೆ
ಬಲ್ಲಿದ ಪೂತನಿ ವಿಷವನುಂಡು
ಮೆಲ್ಲನೆ ತೃಣನ ಕೊಂದನಂತೆ ೪

ಪಕ್ಕಿ ತನ್ನ ವಾಹನವಂತೆ
ಪಾವು ತನ್ನ ಹಾಸಿಗೆಯಂತೆ
ಮುಕ್ಕಣ್ಣ ತನ್ನ ಮೊಮ್ಮಗನಂತೆ
ಮುದ್ದು ಮುಖದ ಚೆಲ್ವನಂತೆ ೫

ಕರಡಿ ಮಗಳ ತಂದನಂತೆ
ಶರಧಿ ಮಗಳು ಮಡದಿಯಂತೆ
ಧರಣಿಯನ್ನು ಬೇಡಿದನಂತೆ
ಎರಡೇಳು ಲೋಕದೊಡೆಯನಂತೆ ೭

ಹಡಗಿನಿಂದಲಿ ಬಂದನಂತೆ
ಕಡಲ ತಡಿಯಲಿ ನಿಂದನಂತೆ
ಒಡನೆ ಮಧ್ವರಿಗೊಲಿದನಂತೆ
ಒಡೆಯ ಹಯವದನನಂತೆ ೭

## ಸ್ವಪ್ನ ಪದ

### ೪೮ ಭಾಮಿನಿಷಟ್ಪದಿ

ನೆನೆವೆ ನಾರಾಯಣನ ಪಾದವ
ನೆನೆವೆ ನಾರಾಯಣಿಯ ಚರಣವ
ನೆನೆವೆ ಪ್ರಾಣನ ಪದವ ಭಾರತಿದೇವಿಯಂಘ್ರಿಯನು
ನೆನೆದು ಶ್ರೀಹಯವದನ ಸ್ವಪ್ನದೊ
ಳೆನಗೆ ಪೇಳಿದ ಪದವ ಲೋಕದ
ಜನರಿಗಿದ ಸಂಗ್ರಹವ ಮಾಡುವೆನವನ ಕೃಪೆಯಿಂದ ೧

ಎನ್ನ ಸೇವೆಯ ಬೇಸರದೆ ದಿನ
ದಿನ್ನ (ದಿನ) ಮಾಡುವ ಮನುಜರಿಂಗೆ ಪ್ರ
ಸನ್ನನಾಹೆ ಕೃಪಾಳು ಎಂಬುದು ಎನಗೆ ಬಲು ಬಿರುದು
ಮನ್ನದಲಿ (ಮನದಲಿ) ಬೇಸತ್ತುಕೊಂಡರೆ
ಮಣ್ಣು ಹೊಯಿಸದೆ ಮಾಣೆನದರಿಂ
ದುನ್ನತೋನ್ನತ ಪೂಜೆಗಳನನುದಿನ್ನ ಮಾಡುತಿರು ೨

ಕೇಳು ಮಾನವ ನಾನು ಭಕ್ತರು
ಪೇಳಿದಂದದಿ ನಡೆವೆ ನವರನು
ಲಾಲಿಸುತ ಪಾಲಿಸುವೆ ಬಿಡೆನೆಂಬುದು ನಿದಾನವಿದು
ಆಲಸವ ಮಾಡಿದರೆ ಕೇಳೆನು
ಕಾಲಕಾಲದೊಳೆನ್ನ ಪೂಜೆಯು
ಮೇಲು ಮೇಲೆಂದೆನಿಸಿ ನೆರೆಕೊಂಡಾಡಿ ಕುಣಿದಾಡು ೩

ದೀನ ಮಾನವ ಕೇಳು ಭಕ್ತರ
ಧೀನನೆಂಬುದು ತಪ್ಪದವರಿ
ಸ್ನೇನು ಮಾಡಿದರದನು ಕೈಗೊಂಜೆನು ಸರಾಗದಲಿ
ಹಾನಿಪಡಿಸುವೆನೆನ್ನೊಳಗುದಾ
ಸೀನವನು ಮಾಡದಲೆ ನೀನೆರೆ
ಜಾಣನಾಗಿರು ಮರೆಯದೆನ್ನನುದಿನದಿ ನೆನೆಯುತಿರು ೪

ಮಿಕ್ಕ ದೇವರ ತೆರದಿ ನಾ ಮರೆ
ಹೊಕ್ಕವರ ಬಿಡೆನೆನ್ನ ಕರುಣ ಕ
ಟಾಕ್ಷವೀಕ್ಷಣ ಖಳರ ಶಿಕ್ಷಿಸಿ ಜನರ ರಕ್ಷಿಪುದು
ಸೊಕ್ಕಿ ನಡೆಯೆ ವಿಪತ್ತನಾಗಲೆ
ತಕ್ಕುದನು ತೋರಿಸುವೆ ನೀನೇ
ದಿಕ್ಕುದೆನೆಯೆಂದೆನ್ನ ನಂಬಲುಪೇಕ್ಷೆ ಮಾಡೆನೆಲೈ ೫

ಅಂಜಬೇಡೆಲೆ ಮನುಜನಾ ಜಡ
ಕುಂಜರನ ಕಾಯ್ದವನು ಪರರಿಗೆ
ಸಂಜೆಯನು ತೋರಿಸಿ ಧನಂಜಯನಸುವ ಪೊರೆದವನು
ಕಂಜಲೋಚನೆ ಕರೆಯೆ ವಸ್ತ್ರದ
ಪುಂಜಗಳ ಕೊಟ್ಟವಳ ಸಲಹಿದೆ
ನಂಜುಗೊರಳನ ರಿಪುವ ಕುಂದಿಸಿದನುವ ಕೇಳ್ದರಿಯ ೬

ಜಲಧಿಯೊಳಗಾಳಿದೆನು ಬ್ರಹ್ಮಗೆ
ಕಲಿಸಿದೆನು ಶ್ರುತಿತತಿಯು ನೀರೊಳು
ಮುಳುಗಿದದ್ರಿಯನೆತ್ತಿಕೊಟ್ಟೆನು ಸುರರ ಸುಧೆಗಾಗಿ
ಇಳೆಯು ವೈರಿಯು ಕೊಂದೆ ಪಿತ ನಿಂ
ದಳಿವ ಶಿಶುವನೆ ಪೊರೆದೆ ಬಳಿಕಲಿ
ಬಲಿಯು ಬೇಡಿದೆ ರಾಯರನು ತಲೆಕೆಳಗು ಮಾಡಿದೆನು ೨

ಅಂಬುಧಿಯನಂಬಿನಲಿ ಎಸೆದೆನು
ಕುಂಭಿಣಿಯು ಕಂಬನಿಯು ತೊಡೆದು ತ್ರಿ
ಯಂಬಕನ ಹಿತಕಾಗಿ ತ್ರಿಪುರದ ವಧುಗಳನು ಕೆಡಿಸಿ
ಇಂಬುಗೊಡದಲೆ ಕಲಿಯು ಧರ್ಮಕ
ದಂಬವನು ತುಂಡಿಸಿದೆ ನೆನಗೆಣೆ
ಎಂಬ ದೇವನದಾವನೈ ಈರೇಳು ಲೋಕದಲಿ ೮

ಎನ್ನ ಚರಣೋದಕವ ಶಿವ ಪಾ
ವನ್ನ ವೆನುತಾದರದಿ ಧರಿಸಿದ
ನೆನ್ನ ಕರುಣಾಬಲದಲಾವಿಧಿ ವೇದ ನ್ಪೋದಿದನು
ಎನ್ನರಸಿ ರಮೆ ಸಕಲಗುಣ ಸಂ
ಪನ್ನ ಸುರಮುನಿ ಮಾನ್ಯ ಶ್ರುತಿತತಿ
ಗಣ್ಯನೆನುತಲಿ ಮನದಿ ಮನ್ನಿಸಿ ಮುನ್ನ ವರಿಸಿದಳು ೯

ಎನ್ನ ವೈಕುಂಠಾವಲೋಕನ
ಜನ್ನರಿಗೆ (ಜನರಿಗೆ) ಭವಬಂಧ ಮೋಚನ
ವೆನ್ನ ನಾಮಸ್ಮರಣೆ ಪಾಪಾಟವಿಗೆ ಕಾಳ್ಗಿಚ್ಚು
ಇನ್ನು ನೀನನ್ಯರನು ಬೀಳ್ಕೊ
ಟ್ಟೆನ್ನ ಚರಣದೊಳಿಟ್ಟು ಮನವನು
ಘನ್ನ ಭಕುತಿಯು ಮಾಡು ಸುಕೃತವ ಕೂಡು ನಲಿದಾಡು ೧೦

ಸ್ನಾನದಾನ ಧ್ಯಾನಗಳನನು
ಮಾನವಿಲ್ಲದೆ ಮಾಳ್ಪುದದರಿಂ
ದೇನು ಹಾನಿಯು ನಿನಗೆ ಬಾರದು ಎನ್ನ ಕರುಣದಲಿ
ದೀನ ತನುವನು ಪೊರೆಯದಿರು ಬಲು
ಹೀನ ಜನರೊಡನಾಡದಿರು ಸು
ಜ್ಞಾನಿಗಳನನುಸರಿಸಿ ಎನ್ನ ಚರಿತ್ರೆಗಳ ಕೇಳು ೧೧

ನೋಡು ಪುಣ್ಯಕ್ಷೇತ್ರಗಳ ಲೆಡೆ
ಮಾಡು ಕೀರ್ತಿಯ ಪಾಡು ಭಕುತಿಯ
ಕೂಡು ದುರಿತಂಗಳನು ತರಿದೀಡ್ಯಾಡು ದಿನದಿನದಿ
ಮಾಡು ಮಾಡೆನ್ನಂಘ್ರಿ ಪೂಜೆಯ
ಬೇಡು ಮೇಲಣ ಮುಕುತಿ ಪಥವನು
ನೀಡು ಸಂತತವೆನ್ನ ಸುಕಥಾಮೃತವ ಸುಜನರಿಗೆ ೧೨

ಗಾನರಸದಿಂ ಕೂಡಿ ಎನ್ನ ಮ
ಹಾನುಭಾವವ ತುತಿಸಲೀಭವ
ಕಾನನಕ್ಕೆ ಕೃಶಾನು ದುರಿತ ತಮಿಸ್ರಕಿದು ಭಾನು
ನಾನು ನನ್ನದಿದೆಂಬ ಮನದಭಿ
ಮಾನವನು ಬಿಡು ಕಂಡಕಂಡರ
ನೀನು ಯಾಚಿಸಿ ದುಃಖ ಸಾಗರದೊಳಗೆ ಮುಳುಗದಿರು ೧೩

ದೇವರೆಲ್ಲರು ಎನ್ನದಾಸರು
ಶ್ರೀವಧುವೆ ಎನ್ನರಸಿ ಜಗದೀ
ಜೀವರಾಸಿಯ ನಾನೆ ಪುಟ್ಟಿಸಿ ಮಗುಳೆ ರಕ್ಷಿಪೆನು
ಲಾವಕರ ಕೊಲಿಸುವೆನು ನರಕವ
ನೀವೆ ಸ್ವರ್ಗವನಿತ್ತು ಸುಜನರ
ಕಾವೆನಿದು ವೇದಾಂತ ಸಿದ್ಧಾಂತದ ರಹಸ್ಯಕಣ ೧೪

ಏಷಸರ್ವಂ ಎನ್ನದೇ ನಿ
ರ್ದೋಷ ಮಂಡೂಕೋಪನಿಷತಿ
ನ್ನೇಷ ಭೂತಾಧಿಪತಿ ಎನ್ನದೆ ಕಾಣ್ವರೂಪನಿಷತು
ಏಷಸರ್ವೇಶಾನನೆನದೆ ವಿ
ಲಾಸದಿಂ ಋಗ್ವೇದ ಮೊದಲಾ
ಗೀ ಸಮಸ್ತವು ಜನ್ಯವೆನಿಸವು ಋಷಿಮುಖೋದ್ಗತವು ೧೫

ಅಗ್ನಿದೇವರೊಳಧಮ ಮಿಕ್ಕ ಸು
ರರ್ಗಳೀ ಮಧ್ಯಮರುಸಲೆ ಸ
ರ್ವಜ್ಞ ವಿಷ್ಣುವೆ ಪರನು ಎಂಬೀವೇದ ಬ್ರಾಹ್ಮಣವೆ
ಬಗ್ಗಿಸಿತು ಕುಜನರ ಶಿರಂಗಳ
ಸುಗ್ಗಿಯೆನಿಸಿತು ಜ್ಞಾನಸಸಿಯುಪ
ವರ್ಗವೀವೆನು ನಾನು ನನಗೆಣೆಯಾರು ಜಗದೊಳಗೆ ೧೬

ದ್ವಾಸುಪರ್ಣ ಶ್ರುತಿಗಳೆಂಬೀ
ಶ್ರೀಶನೆಂದೊಬ್ಬಗೆಯು ಖಗ ನಾ
ನಾ ಶರೀರದೊಳಿದ್ದು ಕ್ಲೇಶವನುಣದೆ ಇಹುದುಗಡ
ಕ್ಲೇಶವೀ ಎರಡನೆಯು ಜೀವ ಖ
ಗೇಶನಾಜ್ಞೆಯಲಿದ್ದು ತಾನೇ
ದೇಶ ದೇಶದೊಳುಣುತಿಹುದು ಪೇಳುವುದ ನೆರೆನಂಬು ೧೭

ಶಾಂತ ಶ್ರುತಿಗಳು ಕೆಲಕೆಲವು ಶ್ರೀ
ಕಾಂತ ಚಿಂತಾದೂರನೆನುತಿವೆ
ಚಿಂತೆಯಲಿ ಬಳಲುತಿಹ ಜೀವರಗಣಗಳದು ಬೇರೆ
ಎಂತಿವೆಕೊ ನೀವೆಲ್ಲ ನೋಡಿರೊ
ಕಂತುಪಿತ ಖಳರಟ್ಟಿ ಭಜಕರ
ಸಂತವಿಸುವಸ್ವಾಮಿ ಎನುತಿವೆ ಕೆಲವು ವೇದಗಳು ೧೮

ಹಿಂದೆ ನಾನೇ ಪ್ರಾಣನೆಂದ ಸು
ರೇಂದ್ರನಾಶಯು ವ್ಯಾಸ ತತ್ಸಂ
ಬಂಧ ಬಾಹುಳ್ಯದಲಿ ನಾನೇ ಪ್ರಾಣನೆಂದೆನಿಸಿ
ಎಂದು ತೋರನೆ ಬಲ್ಲಬುಧರದ
ರಿಂದ ನಾನೇ ಬ್ರಹ್ಮನೆಂಬೀ
ವೃಂದದುಕ್ತಿ ಬ್ರಹ್ಮ ಸಂಬಂಧದಿಂದಲೆನಬೇಕು ೧೯

ಇವನೆ ನಾನೆಂದರಸು ಸಚಿವನ
ನೆವವಿ ನುಡಿದರೆ ಬಲ್ಲ ಗ್ರಾಮದ
ಲವರು ಕೂಟದಿಕಂಡು ರಾಯನ ಸಚಿವನೆನ್ನುವರೆ
ದಿವಿಜದನುಜರು ಕೂಡ್ದರಾಸಿಂ
ಧುವನು ಕಡೆವುದಕೆನಲು ಕೋವಿದ
ರವನಿಯಲಿ ಸಾಮಾನ್ಯವಚನಕೆ ಭ್ರಮಿಸಿ ಮರುಳಹರೆ ೨೦

ಬೊಮ್ಮ ಹೆಮ್ಮಗ ರುದ್ರ ಮೊಮ್ಮಗ
ಸುಮ್ಮನಸರಿಗೆ (ಸುಮನಸರಿಗೆ) ಸುಧೆಯನೂಡಿಸೆ
ದುರ್ಮಮಯ ಕಾಲಾಖ್ಯ ಚಕ್ರವನಾನೆ ನಡೆಸುವೆನು
ಅಮ್ಮರೇಶಗೆ (ಅಮರೇಶಗೆ) ಭಾಗ್ಯವಿತ್ತವ
ನಮ್ಮರವ ಕಿತ್ತರಲು ದಿವಿಜರ
ಹೆಮ್ಮಗಳ ನಾನೋರ್ವನೇ ಹಾಬ್ಬೆಟ್ಟಿದೆನೊ ಮನುಜ ೨೧

ನೋಡು ರಾಮನ ಸೇವೆಗಮರರು
ಕೋಡಗದ ತನುವಾಂತು ಗಿರಿಗಳ
ಕೋಡುಗಲ್ಗಳ ಕಿತ್ತು ತಲೆಯಲಿ ಹೊತ್ತು ಮನವಿತ್ತು
ನಾಡರಿಯೆ ಜಲನಿಧಿಗೆ ಸೇತುವೆ
ಮಾಡಿ ಮದ್ಭಟರೆನಿಸಿ ಕೊಳ್ಳರೆ
ಮೂಢನಾಗಿರಬೇಡ ನಾನೇ ಸಕಲ ಸುರರೊಡೆಯ ೨೨

ನಾನದುಃಖ ನಿಧಾನಿಸಲು ಸಲೆ
ದೀನ ಜೀವನು ದುಃಖಭರಿತನು
ನೀನೆ ನೋಡು ಧನಾದಿ ಹಾನಿಯುಲಳುವ ಜೀವರನು
ಪನನೆಂಜೆನು ರೋಗ ರುಜೆನದಿ
ಮಾನವಗೆ ಬರುತಿಪ್ಪ ನೋವನು
ಸ್ವಾನು ಭವದಲಿ ಸಿದ್ಧ ಕಂಡದನುಸುರೆ ಬಲ್ಲವರು ೨೩

ನಾನು ನನ್ನಯ ಶಕ್ತಿಯಿಂದಲೆ
ದಾನವರ ಮರ್ದಿಸುವೆ ಜೀವರಿ
ಗಾನು ಶಕ್ತಿಯು ಕೊಟ್ಟರುಂಟಿಲ್ಲದೊಡೆ ಜಡಕೆ ಸಮ
ಕಾಣು ಕುಂಟನ ಕಾಣು ಕಿವುಡನ
ಕಾಣುಕಾಣನ ಶಕ್ತಿಯಿದ್ದರೆ
ಹೀನ ಪಾದಂಗಗಳ ಭಂಗವನೇಕೆ ಬಿಡಿಸಿಕೊಳೆ ೨೪

ನಾನು ಸದ್ಗುಣಪೂರ್ಣ ವಂದ್ಯನು
ಹೀನ ಗುಣದಿಂ ಜೀವನಿಪ್ಪನು
ನಾನು ಲಕ್ಷ್ಮೀರಮಣ ಜೀವನು ಶತದರಿದ್ರನೆಲ್ಲೈ
ನಾನು ಸುರಮುನಿ ಸೇವ್ಯ ಚರಣನು
ಕಾಣುಜೀವ ನಿರಂಘ್ರಿ ಕರಣನು
ನಾನು ಸಾವಿಲ್ಲದನು ಜೀವನ ಮೃತ್ಯು ಕೊಲುವುದೆಲ್ಲೈ ೨೫

ನಾನು ಸುಜ್ಞನು ಜೀವನಜ್ಞನು
ನಾನು ಮುಕ್ತನು ಜೀವ ಬದ್ಧನು
ನಾನು ಪಾತಕಹೀನ ಜೀವನು ಪಾಪ ಭರಿತನೆಲ್ಲೈ
ನಾನು ಜನ್ಮವಿದೂರ ನಾನಾ
ಯೋನಿಯಲಿ ಜನಿಸುತಿಹ ಜೀವನು
ಮಾಣು ಛಲವನು ನನ್ನ ಜನಕನ ಹೆಸರ ಹೇಳಿನ್ನು ೨೬

ದೇವಕಿಯು ಬಸುರಿನಲಿ ನಾನೇ
ದೇವ ಕಾರ್ಯಕೆ ಬಂದ ಬಗೆಯನು
ಭಾವ ಕೋಪಿದಕೆಲ್ಲ ತತ್ತ್ವನ್ಮೂಲ ರೂಪವನು
ಜೀವರಿಗೆ ಬೋಧಿಸರೆ ಮೃತ್ಯುವ
ಕಾವ ವೈಕುಂಠದಲಿ ಇದ್ದಾ
ಶ್ರೀವತ್ಸವನು ನೋಡು ಪೊಟ್ಟೆಯುಬಿಟ್ಟು ಪೊರವಂಟೆ ೨೭

ಹಿಂದೆ ಜಗವನು ನನ್ನ ಬಸುರಲಿ
ನಂದ ಗೋಪನರಾಣಿ ಕಾಣಳೆ
ಚಂದದೆನ್ನಲಿ ವಿಶ್ವರೂಪವ ಪಾರ್ಥಕಾಣನೆಲೆ
ಮಂದಮತಿಯೆ ನಿಧಾನಿಸುತ್ತಿರೆ
ಅಂದವೆನ್ನಯ ದೇಹ ವಳಿದರೆ
ಬಂದುದೆಲ್ಲ ಚರಾಚರಂಗಳಿ ಗಂದೆ ನಿರ್ಬಂಧ ೨೮

ಮಂದಮಾನವ ಶ್ರೀ ನೃಸಿಂಹಗೆ
ತಂದೆಯಾವನು ತಾಯಿಯಾವಳು
ಮಂದರವ ಧರಿಸುವರೆ ಕೂರ್ಮನ ಪೆತ್ತವರು ಯಾರು
ಹಿಂದೆ ಬೊಮ್ಮನ ಪ್ರಳಯಜಲಧಿಯೊ
ಳೊಂದೆ ವಟಪತ್ರದಲಿ ಮಲಗಿದ
ಇಂದಿರಾಪತಿ ಯೆನಿಪನಾನಿತ್ಯರೊಳು ನಿತ್ಯನೆಲ್ಲೆ ೨೯

ಇಂತನಂತ ವಿರುದ್ಧ ಧರ್ಮಗ
ಳಾಂತಜೀವರಿಗೈಕ್ಯವೆಂತಿದು
ಭ್ರಾಂತಿ ಸಂತತ ತ್ಯಜಿಸದಿರಲು ಪ್ರಕಾಶತಮವಹುದೆ
ಸಂತರಿಂದ ನಿರಂತರದಿ ವೇ
ದಾಂತಶ್ರವಣವ ಮಾಡಿ ನೀ ದು
ರ್ಭ್ರಾಂತಿಗೊಳಗಾಗದಲೆ ಎನ್ನಯ ಗುಣವ ನೆನೆಯುತಿರು ೩೦

ಕುಂಭದಭ್ರವುಪಾಧಿಯಿದ್ದರು
ಸ್ತಂಭಿಸುವುದೇ ಸುತ್ತ ಪಾತ್ರೆಯು
ಇಂಬುವಡೆದಿರೆ ವ್ಯಾಪ್ತಿಚಿತ್ತಿಗೆ ಹಾನಿ ಸಲ್ಲದೆಲೈ
ಅಂಬರಾಗ್ರದ ಸ್ವರ್ಗದಲಿ ನೀ
ನುಂಬ ಸುಖಗಳನೆಂತು ಮಾನವ
ಕುಂಭಿ ಪಾಕಕ್ಕಿಳಿದು ಯಾತನೆಯುಂತೆ ಕೈಗೊಂಬೆ ೩೧

ಎಲ್ಲಿ ಪೋಪುದು ದೇಹ ಮು
ತ್ತಲ್ಲಲ್ಲಿ ನೆಲೆಸಿಹ ಚಿತ್ತೆ ಜೀವವಿ
ದಲ್ಲವಲ್ಲವಲಕ್ಷಣವಿ ವೃತ್ತ್ಯಗಳು ಬಹುದಾಗಿ
ಇಲ್ಲ ಜಡದೇಹಕೆ ನಡತೆ ತಾ
ನಲ್ಲಲ್ಲಿ ತುಂಬಿದ ಚಿತ್ತೆ ನಡೆಯುದೆ
ಸಲ್ಲದೆಲೆ ಈ ಧರ್ಮ ಬೊಮ್ಮಗೆ ಶಕ್ತಿಯೆಂಬ ಗುಣ ೩೨

ಮಾಯೆಯಿಂತೆಂದೆಂಬುವೀ ದು
ರ್ಮಾಯಿ ತಾ ಜಡವಾದ ಕಾರಣ
ಪೋಯಿತಿನ್ನು ಉಪಾಯದಲಿ ಮತವೆಂತು ನಿಲಿಸುವೆ ನೀ
ತಾಯಿ ಪೊಟ್ಟೆಯ ಪೊಕ್ಕರೆಯು ನುಡಿ
ವಾಯತವ ನರಿತವರು ನಿನ್ನನು
ಬಾಯ ಬರೆಯಿಸಾಯರು ನಿಧಾನಿಸೆ ಪಾಯುವುತವೆ ಮತ ೩೩

ಒಂದು ಚಿತ್ತಿಂದುದಯಿಸಿತು ಮು
ತ್ತೊಂದು ಚಿತ್‌ಸ್ವಸ್ಥಾನದಿಂದಲೆ
ಒಂದು ಭೋಜನ ಜಪತಪಧ್ಯಾನಗಳ ಮಾಡಿತೆಲೈ
ನಿಂದ್ಯ ದೇಹೋಪಾಧಿ ಈ ಸಂ
ಬಂಧಿಸಲು ಬೇರೆಂದು ನುಡಿವೀ
ಮಂದನುಕ್ತಿಯು ವ್ಯರ್ಥಪೋಯಿತು ಅಕೃತಬಂಧನವೆ ೩೪

ಒಂದು ದೇಹದಲೊಂದು ಚಿತ್ಸುಖ
ಬಂಧವಲ್ಲದೆ ದೇಶದೇಶದಿ
ಪೊಂದಿಕೊಂಡಿಹ ಚಿತ್ತಿದೊಂದೇ ಜೀವನೆಂಬುವಗೆ
ಮುಂದ ಮರಣದಪಾಯುವೆಂಬುದು
ಬಂದು ಹೋಯಿತು ಈ ವಿಯೋಗವ
ದೊಂದು ದೇಹಕೆ ಬಹುದು ಚಿತ್ತೇ ವ್ಯಾಪ್ತವೆಂಬುವಗೆ ೩೫

ಜೀವಭೇದವನಾದಿಯೆಂಬುದ
ದಾವ ಬಗೆಯಲಿ ಬೊಮ್ಮ ತಾನೇ
ಜೀವಭಾವವನೈದಿತೆಂಬೀ ನಿನ್ನ ಮೋಹಕವ
ತೀವಿ ನಡೆಸಿದೆ ಬೊಮ್ಮದಂಗಕೆ
ನೋವಕೊಡುವಿಂದ್ರಿಯುವ ಕೂಡಿಸಿ
ಜೀವರಾಶಿಗೆ ತೆಗೆವದೆಂತೋ ನಿರ್ವಿಕಾರವಲೆ ೩೬

ಇಂತು ದುರ್ಮತ ಜೀರ್ಣಕಂತೆಯು
ತಂತುವಾಯ್ತು ಮುಹಂತರಿದಿರಲಿ
ಸಂತ ಹೆಜ್ಜೆಯು ನೋಡಿ ನಿಲ್ಲದ ಭ್ರಾಂತಿಗೊಳಿಸಿತಲ್ಲೆ
ಹಂತನಿವನೆಂತಾದರಾ ವೇ
ದಾಂತ ಪ್ರಸಿಪಂಥಗಳನೆಲ್ಲ ಸ
ಭಾಂತರದಲಿನ್ನಾವ ಬಗೆಯಲಿ ನಿಂತು ನಿಲಿಸುವನು ೩೭

ಮುಕ್ತಿಯೆಂಬುದು ಮರ್ತ್ಯರಿಗೆ ಎ
ನ್ನರ್ಥಿಯ ಸ್ಥಾನಗಳು ಭಕ್ತಿಯು
ಶಕ್ತಿಯಿಂದಲಿ ಹತ್ತಿ ಮೃತ್ಯುವನೊತ್ತಿ ಮತ್ಪದದ
ಹತ್ತಿಲೇ ಸುಖಿಸುವುದು ಭೃತ್ಯರಿ
ಗಿತ್ತ ಖೇದವನಿತ್ತು ಮರ್ತ್ಯನು
ವ್ಯರ್ಥ ಪೊಕ್ಕಳಿಸಿದರೆ ನಾನು ಪ್ರಮತ್ತನಲ್ಲವಲೆ ೩೮

ಮರ್ತ್ಯ ಮೃತ್ಯುವ್ಯಾಳ ಭೀತರಿಂ
ಬುಕ್ತಿಯರ್ಥವ ನೋಡು ಮತ್ತದು
ಪ್ರಾಪ್ತಿಯೋ ಕೈವಲ್ಯಗಡ ಮೃತ್ಯುವಿಗೆ ಶತ್ರುಗಡ
ಮತ್ತೆ ಮರುಳಾಗದಿರು ನಾ ಸ
ರ್ವೋತ್ತಮನು ಭೃಗುವೆಟ್ಟಿದರೆ ಆ
ನುತ್ತಮೋತ್ತಮ ದಕ್ಷನಾಗಿಯು ತಾಳಿಕೊಂಡೆನೆ ಸೈ ೩೯

ಎಲ್ಲವಿಲ್ಲೆಂಬುವಗೆ ನುಡಿವುದ
ಕಿಲ್ಲ ನಾಲಿಗೆ ಕೇಳ್ವ ಕರ್ಣಗ
ಳಿಲ್ಲ ಪೇಳ್ವಾಚಾರ್ಯರಿಲ್ಲ ವಿವೇಕವಿಲ್ಲವೆಲೆ
ಕಲ್ಲಕಂಭವ ಪೋಲ್ವ ನಿನ್ನನು
ಬಲ್ಲವರು ಬಲ್ಲಿದರೊಳಪ್ರತಿ
ಮಲ್ಲರೆನ್ನಾಳುಗಳು ಸೋಲಿಸಿ ಜಳ್ಳು ಮಾಡುವರು ೪೦

ಈಗಲುಂಟೆನ್ನೊಂದು ಕಾಲದಿ
ಪೋಗುವುದು ಜಗವೆಂಬ ನುಡಿ ಎನ
ಗಾಗದೈ ತ್ರೈಕಾಲಿಕ ಪ್ರತಿಷೇಧವೆಂಬುವಗೆ
ಆಗಮವನರಿಯದವನೆನ್ನುತ
ಬೇಗವನು ಬಾಯ್ಗಿಕ್ಕಿ ನಿನ್ನನು
ಪೋಗೆನುತ ಪೊರಗಟ್ಟುವರೆಲೈ ನನ್ನ ಕಿಂಕರರು ೪೧

ಇಷ್ಟದೇವರ ಮಧ್ಯದಲಿ ಮನ
ಮುಟ್ಟಿ ನನ್ನನೆ ಭಜಿಸು ದಿವಿಜರು
ಶಿಷ್ಟಜನರಿಗೆ ಗುರುಗಳೆಂದವರಂಘ್ರಿಗಭಿನಮಿಸು
ನಷ್ಟವಾಗದವೋಲು ನಿನ್ನನು
ಘಟ್ಟಿಯಾಗಿಯೆ ರಕ್ಷಿಸುವೆ ನಾ
ದೃಷ್ಟಿಗೋಚರನಹೆನು ಮುಕ್ತಿಯ ಕೊಟ್ಟು ಸಲಹುವೆನು ೪೨

ಎನ್ನ ಗುಣಗಳ ಪೊಗಳುತಿರುವೀ
ಪೂರ್ಣಪ್ರಜ್ಞರ ಮತವೆ ಸುಮತ ಪ್ರ
ಸನ್ನ ಸುಧೆಸಮ ಭವವಿಮುಕ್ತಿಯ ಪಥವೆ ಸತ್ಪಥವು
ಅನ್ಯಮತಗಳ ಜರಿದು ಈ ಸಂ
ಪನ್ನ ಮರುತನ ಮತವ ಮನದಲಿ
ಮನ್ನಿಸುತ ಮನನವನು ಮಾಳ್ಪರನಿನ್ನು ಸಲಹುವೆನು ೪೩

ವಾದಿರಾಜಗೆ ದೇವ ಕಲಿಸಿದ
ಮಾಧವನ ಗುಣಮಾಲೆಯನು ಬರೆ
ದೋದಿ ಪಠಿಸುವ ಮಾನವರಿಗೆ ವಿಮುಕ್ತಿ ಪಥವಹುದು
ವಾದಶಕ್ತಿಯನಿತ್ತು ತನ್ನಯ
ಪಾದಪದ್ಮದ ನೆನಹನೀವ ಮ
ಹಾದಯಾಂಬುಧಿ ಹಯವದನ ಕೃಪೆಯಿಂದ ಸಲಹುವನು ೪೪

ಇಂತು ಸ್ವಪ್ನಾವಸ್ಥೆಯಲಿ ಮಾ
ಕಾಂತ ಕರುಣಾವಂತನತಿಬಲ
ವಂತ ಸರ್ವಮಹಂತ ಮಹಿಮ ದುರಂತ ನೈಜಜನ
ಶಾಂತ ಶ್ರೀ ಗುರುವಾದಿರಾಜಗೆ
ನಿಂತು ಪೇಳಿದ ಪದಗಳೆನಲಿದ
ನಂತರಂಗದಲೊರೆದ ಸಿರಿ ಹಯವದನ ಕೃಪೆಯಾಂತು ೪೫

## ೫೦ ಶ್ರೀ ಹರಿಸರ್ವೋತ್ತಮ ಸಾರ

ಕಾಲ ತೊಳೆದವನೊಬ್ಬ ತೊಳೆಸಿಕೊಂಡವನೊಬ್ಬ
ಮೌಳಿಯಮೇಲೆ ಜಲವ ಧರಿಸಿದನೊಬ್ಬ
ಪಾಲಿಸುವ ಪ್ರಭುವೊಬ್ಬ ಕೊಲುವ ತಳವಾರನೊಬ್ಬ
ಮೂಲೋಕವರಿಯೆ ಪುಟ್ಟಿಸಿದ ಪಿತನೊಬ್ಬ
ಆಲೋಚನೆಯಲ್ಲಿ ಬಲ್ಲವರಿಗೆ ಸಂಶಯವಿಲ್ಲ
ಮಾಲೆಯನು ಮಹಾಲಕುಮಿ ಹಯವದನಗಿತ್ತಳಾಗಿ ೧

ರಾವಣನ ಕೊಂದ ಪಾಪವ ಕಳೆಯಬೇಕೆಂದು
ದೇವ ರಘುಪತಿ ಸದಾಶಿವನ ಪೂಜಿಸಿದ ಗಡ
ಆ ವಿಧಿಯ ಒಂದು ತಲೆಯನು ಕಡಿದ ಪಾತ್ರದಲಿ
ಈವಾಗ ಕರದಲ್ಲಿಹ ಕಪಾಲವ ಕಾಣನೆ
ಆವರೊಳು ಪೊರಳುವನಪಾವಾತನ ಭಜಿಸನು
ಜೀವರಿಗೆ ಉತ್ಕೃಷ್ಟ ಹಯವನದನಗಿಲ್ಲವೆ ೨

---

ರಾಮಾಯಣದ ಕಥೆಯು ಮಹತ್ಪುಣ್ಯ ಕಥೆಯು ಗಡ
ರಾಮರಾವಣನ ಕೊಂದದ್ದೆ ಮಹಪಾಪಗಡ
ಆಮನು ಮುನಿಗಳೆಲ್ಲ ಪಾಪಕಂಗೀಕರಿಸಿದರೆ,
ಸ್ವಾಮಿ ತಿಲಯದಿ ಬೊಮ್ಮನ ಮೊದಲು ಕೊಲಿಸನೆ
ಧೀಮಂತ ಹಯವದನ ಕೊಂದ ಹಿರಣ್ಯಕ-
ತಾಮಸ ದಿತಿಜರೆಲ್ಲ ಕಶ್ಯಪ ಋಷಿಸುತರಲ್ಲವೆ? ೩

---

ಸೇತುವೆಯ ಕಂಡ ನರರಿಗೆ ಬ್ರಹ್ಮಹತ್ಯ
ಪಾತಕ ಕೆಡುವುದೆಂದು ಶ್ರುತಿಮನ್ನಿಸಲು
ಖ್ಯಾತ ಬೊಮ್ಮನ ತಲೆಯ ಕಡಿಯೆ ಕರದಲಿ ತೊಟ್ಟ
ಆ ತಾಪ ತರಿದ ಸುಕೃತಿ ಸೇತುಮುಖದಿಂದ
ಸೀತೆಯರಸನವನ ಪ್ರತಿಷ್ಠಿಸಿ ನಿಲಿಸಿದ ಜಗ
ನ್ನಾಥ ಹಯವದನ ಭಕ್ತರಬಂಧು ಕಾಣಿರೊ ೪

---

ಶ್ರುತಿಯುವ 'ಕರ್ಮಣಾನೋಕನೀಯ'ನೆಂದು
ತುತಿಸುತಿರೆ ನಿಮ್ಮ ನಿರ್ಗುಣ ಬೊಮ್ಮಕೆ ಕರ್ಮವುಂಟೆ
ಕ್ಷಿತಿಯೊಳಗೆ ರಾವಣನ ವಧೆಯ ಮಾಡಿದ ಸೇತು
ಪತಿತಪಾವನವೆನಲು ಅವನ ಕೊಂದವನ
ಪತಿತಪಾವನನೆಂಬುದೇ ಉಚಿತ ಯುಕುತಿಯು
ಸತತ ಶ್ರೀಹಯವದನನೊಬ್ಬನೆ ಶುದ್ಧ ಕಾಣಿರೊ ೫

ಒಂದು ಕಡೆಯಲ್ಲಿ ವಿಭೀಷಣನ ಪ್ರತಿಷ್ಠಿಸಿದನು ಮ
ತ್ತೊಂದು ಕಡೆಯಲ್ಲಿ ಸದಾಶಿವನ ಪೂಜಿಸಿದ ಇಂ
ತೆಂದು ಪುರಾಣಗಳು ಕೂಗುತಿವೆ ತಪ್ಪಿಸಿನೊಳು
ಹೊಂದಿಸಿ ಸಮನೆಂದು ತೂಗಿ ತೋರುವಂದದಲಿ
ಸಂದೇಹಸಲ್ಲ ಹಯವದನ ರಘುಪತಿಗಿಬ್ಬರು
ಚೆಂದದ ಭಕತರೆಂಬುದು ಸಲೆ ಸುಪ್ರಸಿದ್ಧ ೬

---

ರಾಮ ಶ್ರೀರಾಮರಾಮೇತಿ ರಮೇ ಎಂಬ
ಆ ಮಹದೇವ ಭಗವದ್ಭಕ್ತನಲ್ಲವೇನೊ
ಸ್ವಾಮಿ ತನ್ನ ಭೃತ್ಯರನ್ನು ಪ್ರತಿಷ್ಠಿಸಿದ ನಿ
ಸ್ಸೀಮ ಕರುಣಾಂಬುಧಿ ಮಹಮಹಿಮನೆಂಬರು
ಭ್ರಾಮಕದ ನುಡಿಗಳಿಗೆ ಮರುಳಾಗದಿರು ಹಯವದನ
ರಾಮಚಂದ್ರನೆ ಕಾಶಿಯ ತಾರಕಬೊಮ್ಮ ಕಾಣಿರೊ ೭

---

ಮೂಲರೂಪದಿ ಸುರರು ದ್ವಾರಕಯಾತ್ರೆಯಲಿ
ಪಾಲಸಾಗರ ಯಾತ್ರೆ ಗರ್ಭಯಾತ್ರೆ ಕೇಳಿಯ
ಶೂಲಧರಮಿಳಗಂಜಿ ಭುವನವೆಲ್ಲವ ಸುತ್ತಿ
ಶ್ರೀಲೋಲನಿಹ ವೈಕುಂಠಯಾತ್ರೆಯಿಂದ ಬದುಕನೆ
ಭೂಲೋಕದಲಿ ಪುಟ್ಟಿ ಹಯವದನ ಕೃಷ್ಣ ಮಾಡಿದ
ಕೈಲಾಸಯಾತ್ರೆ ಕೈವಲ್ಯಪತಿಗೆ ಲೀಲೆ ೮

---

ಯಾತ್ರೆಯನು ಮಾಡಿಸಿಕೊಂಡ ಹರಹಿರಿಯನಹನಾಗಿ
ಯು-ಕುತಿ ಬಾಧಕವಾಯ್ತು ಹರಿಹರರೊಳೈಕ್ಯ
ಚಿತ್ರನಿನ್ನ ಮತಕೆ ನೀಸೆ ಶತ್ರುವಾದೆ ಚಾ
ತ್ರ್ಯತ್ತರವಪೇಳೆ ಪರಾಜಯವು ಬಾರದಿಹುದೆ
ಮತ್ತೆ ನೆನೆಯೊ ಹಯವದನಗಿದು ಲೀಲೆಯಾದರೆ
ಸತ್ವ ಹೆಚ್ಚಿತು ಹರಿಸರ್ವೋತ್ತಮನೆಂಬ ಶ್ರುತಿಗೆ ೯

"ವಂದ್ಯವಾನಂ ಪಿತಾಸಂ ಪ್ರತಿಪ್ರವಾಣಂ"
ಎಂದು ರುದ್ರನ ಕೂಡೆ ಶ್ರುತಿಯು ಪೇಳಿತಾಗಿ
ತಂದೆ ಮಕ್ಕಳ ಬಳಿಗೆ ಪೋದಂತೆ ಪೋಗಿ ಮು
ಕುಂದ ಮೊಮ್ಮನಿಗೆ ಹಿರಿಯತನ ಕೊಡಲೆಂದು
ಮುಂದೆ ಜನಿಸಿದ ಕಿರಿಯ ಕುವರರೊಳು ತನ್ನ
ಕಂದನ ಸೃಜಿಸಿದ ಹಯವದನ ಚತುರನಲ್ಲವೆ ೧೦

---

ರೋಮಕೋಟಿಲಿಂಗನೆಂದೆನಿಸಿದ ಹನುಮನೊಂದು
ರೋಮಕೆ ಕೋಟಿ ಶಿವರ ಮಾಡುವ ಶಕ್ತ ಕಾಣಿರೊ
ಆ ಮಹಾತ್ಮನ್ನ ತನ್ನ ಆಳುಮಾಡಿ ನಡೆಸಿಕೊಂಡ
ರಾಮಚಂದ್ರನೆ ಜಗಕೆ ಪರದೈವ ಕಾಣಿರೊ
ಸ್ವಾಮಿ ಹಯವದನ ವೇದವ ತಂದು ಕಮಲಜನ
ಕಾಮಿತವನಿತ್ತನಾಗಿ ಆವನೆ ಜಗದೊಡೆಯ ೧೧

---

ವರವ ಶೋಧಿಪೆನೆಂದು ಕರತನ್ನ ಶಿರದಮೇಲೆ
ಇರಿಸಬಂದ ಖಳಗಂಜಿ ಹರತನ್ನ ಸುರೇಶ್ವರನ
ಅರಮನೆಗೆ ಹೋಗಿ ಅಲ್ಲಿ ಪರಿಹರವ ಕಾಣದೆ ನಮ್ಮ
ಸಿರಿಯರಸನ ಮೊರೆಯೊಗಲು ಹರಣವನು ಪೊರೆದ ಗಡ
ಶರಣರಕ್ಷಕನೆಂಬ ಬಿರುದುಳ್ಳ ಹಯವದನ
ಹರಿಯಲ್ಲದೆ ಪಿರಿದೊಂದು ಪರದೈವವಿಲ್ಲವೈಯ ೧೨

---

ಕಾಶಿಯೊಳು ರಾಮಮಂತ್ರೋಪದೇಶವ ಮಾಳ್ಪ
ಈಶ ಜ್ಞಾನರ ಮತದಿ ಜಗಕೆ ಗುರುವೆಂತೆಂಬ
ಆ ಶಿವನ ಮಂತ್ರದೇವತೆ ತಾರಕ ಬೊಮ್ಮನೆನಿಪ
ವಾಸುದೇವನೆ ಜಗಕೆ ಪರದೈವ ಕಾಣಿರೊ
ಈಸು ತತ್ವವ ಪೇಳ್ದ ಹರಗೆ ನಮ್ಮ ಹಯವದನ
ಏಸು ಮನ್ನಣೆಯ ಮಾಡಿದರುಚಿತ ಕಾಣಿರೊ ೧೩

ಹರನಾರು ಪುರಾಣಗಳು ವಿರಂಚನಾರು ಪುರಾಣಗಳು
ಹರ ವಿರಂಚರಲ್ಲವೆಂದು ಹಿರಿಯರೆ ಮನ್ನಿಸಲಾಗಿ
ಪರಮಸಿದ್ಧಾಂತ ತೋರಿದರೆ ನಿಪಬುಧರಿಗೆ
ಪುರಾಣಗಳ ಮೇಲೆ ಮಾಡುವ ಪರಮಾದರ ಸಲ್ಲದೈಯ
ದುರಾಗ್ರಹ ಮಾಡಬೇಡ ಗುರುಮತವ ಬಿಡಬೇಡ
ಸಿರಿಯರಸ ಹಯವದನನ ಆರು ಪುರಾಣಗಳ ನೋಡಿ ೧೪

---

ಒಂದು ಬೊಮ್ಮ ಚಿತ್ತು ಒಂದು ಜೀವ ಚಿತ್ತು
ಇಂ-ತೆಂದು ಶ್ರುತಿಸ್ಕಂಧ ಚೇತನೆಲ್ಲ ಗ್ರಂಥಹಾಸ್ಯ
ದಿಂದವರಿಗೆ ಹರಿಜಡನೊ ಹರಜಡನೊ ಮಂದಹಾಸ
ದಿಂದ ಜಡರು ಮನುಮುನಿಗಳೆಲ್ಲ ಇಂಥಾ ಶಿವನವಹಿಸಿ
ಕೊಂಡು ವಾದಿಸುವರು
ಹಿಂದು ಮುಂದರಿಯರೆಂದು ಹಯವದನ ನಗನೆ ೧೫

---

ನೂರು ರುದ್ರರವೇಳೆ ಕಾರ್ಯವಾದರೇನವರು
ಈರೇಳು ಲೋಕವನವರು ಸಂಹರಿಸಲರಿಯರು ಗಡ
ಕಾರ್ಯವಿಲ್ಲದ ಶಿವರಪೇಳೆ ಅದ್ವೈತಮತ
ಹಾರಿಹೋಗದೆ ಬರಿದೆ ಹಲವು ಹಂಬಲಿಸದೆ
ಶ್ರೀರಮಣ ಹಯವದನ ನೊಡಂಬಟ್ಟರಿಬ್ಬರನು
ದೂರ ಕಳಚಿದರೆಂದು ಪೂರ್ಣದವರ ನಂಬು ೧೬

* * * * * * ೧೭

೨೧ ರಾಗ ಗುಂಭಕಾಂಬೋಧಿ ತಾಳ

ಇಂದಿರೆಯರಸ ಬಾರೊ ಇಂದುವದನನೆ ಬಾರೊ.
ಕಂದರ್ಪನ ತಂದೆ ಬಾರೊ ಮಂದರೋದ್ಧಾರಿ ಬಾರೈಯ ಪ

ಮತ್ಸ್ಯನಾದವನೆ ಬಾರೊ ಕಚ್ಛಪರೂಪನೆ ಬಾರೊ
ಮೆಚ್ಚಿನಮಹಿಯ ತಂದ ಸಚ್ಚರಿತ್ರನೆ ಬಾರೈಯ

ಅಚ್ಚ ನಾರಸಿಂಹ ಬಾರೊ ಹೆಚ್ಚಿದ ವಾಮನ ಬಾರೊ
ಕೊಚ್ಚಿ ನೃಪರ ತರಿದಂಥ ಸಚ್ಚಿದಾನಂದ ಬಾರೈಯ್ಯ ೧

ರಾವಣನ್ನ ವೈರಿ ಬಾರೊ ಮಾವನ್ನ ಗೆಲಿದನೆ ಬಾರೊ
ಆವಾಗ ಭಕ್ತಾಭೀಷ್ಟ ವೀವ ದೇವಾದಿದೇವ ಬಾರೈಯ್ಯ
ಪಾವನ ಬೌದ್ಧನೆ ಬಾರೊ ಈ ವಸುಧೆಯೊಳ್ ಕಲ್ಕಿ
ರಾವುತನಾಗೆಸೆದ ಶ್ರೀ ವಾಸುದೇವ ಬಾರೈಯ್ಯ ೨

ಇಂಗಿತವರಿತು ಬಾರೊ ಇಂಗಡಲರಸ ಬಾರೊ
ತುಂಗ ಗುಣಗಣ ಬಾರೊ ಸಂಗೀತಪ್ರಿಯ ಬಾರೈಯ್ಯ
ಉಂಗುರಗಳಿಂದೊಪ್ಪುವ ಅಂಗುಳಿಯು ಸನ್ನೆಯಿಂದ
ಪೊಂಗೊಳಲೂದುವ ಚೆಲ್ವ ಮಂಗಳಮೂರ್ತಿ ಬಾರೈಯ್ಯ ೩

ಪಂಕಜನಾಭನೆ ಬಾರೊ ಶಂಕರ ಪ್ರಿಯನೆ ಬಾರೊ
ಕಂಕಣ ಹಾರ ಕುಂಡಲಾಲಂಕೃತ ಮೂರ್ತಿ ಬಾರೈಯ್ಯ
ಕುಂಕುಮ ಶೋಭಿತ ಲಕ್ಷ್ಮಿ ಅಂಕಿತವಕ್ಷನೆ ಬಾರೊ
ಕೊಂಕಿದ ಕುರುಳ ಚೆಲ್ವ ಬಿಂಕವ ಬಿಟ್ಟು ಬಾರೈಯ್ಯ ೪

ಕುಂಜರ ವರದನೆ ಬಾರೊ ಮಂಜುಳ ಭಾಷನೆ ಬಾರೊ
ಅಂಜುವ ದಾಸಂಗೆ ವಜ್ರ ಪಂಜರನೆ ಬಾರೈಯ್ಯ
ಸಂಜೆಯು ತೋರಿಸಿ ಧನಂಜಯನ್ನ ಕಾಯ್ದ ನಿ
ರಂಜನ ಹಯವದನ ರಂಜಿತನಾಮ ಬಾರೈಯ್ಯ ೫

೫೨ ರಾಗ ರೇಗುಪ್ತಿ ಅಟತಾಳ

ಒಲ್ಲೆ ದುರಿತಗಳ ನಾನೊಲ್ಲೆನೊಲ್ಲೆ ಪ
ಫುಲ್ಲನಾಭನ ಸ್ಮರಣೆ ಇಲ್ಲದಿರಲೊಲ್ಲೆ ಅ

ದುರ್ಜನ ಸಂಗವ ನೆಂದೆಂದಿಗೂ ಒಲ್ಲೆ
ಸಜ್ಜನ ವಿರಸಗಳೊಲ್ಲೆ ಒಲ್ಲೆ
ಅರ್ಜುನ ಸಖ ನಿನ್ನ ಸೇವೆಯ ಬಿಡಲೊಲ್ಲೆ
ಅಬ್ಜಬಾಣನ ಮೇಳ ಒಲ್ಲೆ ಒಲ್ಲೆನೊ ಸ್ವಾಮಿ ೧

ಒಲ್ಲಿದ ಹರಿಪಾದ ಪೂಜೆಯು ಬಿಡಲೊಲ್ಲೆ
ಸಲ್ಲದ ಸುಖಗಳನೆಂದಿಗೂ ಒಲ್ಲೆ
ಅಲ್ಲದ ಕರ್ಮಗಳಾಚರಿಸಲೊಲ್ಲೆ　೨
ಖುಲ್ಲ ದೈವದ ಪೂಜೆ ಒಲ್ಲೆ ಒಲ್ಲೆನೊ ಸ್ವಾಮಿ

ಹರಿನಾಮ ಸ್ಮರಣೆಯು ಮನದಿ ಬಿಟ್ಟಿರಲೊಲ್ಲೆ
ದುರುವಿಷಯದಿ ಹರುಷ ಒಲ್ಲೆ ಒಲ್ಲೆ
ಕರುಣಿ ಹಯವದನನ ಕಾಣದೆ ಇರಲೊಲ್ಲೆ
ಹರಿಯೆ ನೀನಲ್ಲದೆ ಅನ್ಯ ದೈವವನೊಲ್ಲೆ　೩

೫೩　ರಾಗ　ಮುಖಾರಿ　ಆದಿತಾಳ

ನಾರಾಯಣ ನಾರಾಯಣ
ನಾರಾಯಣ ನಾರಾಯಣ
ನಾರಾಯಣ ನರಹರಿಯೆ　ಪ

ನಾರಾಯಣ ನರಹರಿಯೆ ಹಯವದನ
ಸ್ವಾಮಿ ನೀನೆನಗೆ ದಯವಾಗೊ　ಅ

ನಿಗಮವ ಕದ್ದೊಯ್ದ ವಿಗಡ ದೈತ್ಯನ ಕೊಂದು
ಆಗಮವ ತಂದು ಅಜಗಿತ್ತೆ
ಆಗಮವ ತಂದು ಅಜಗಿತ್ತೆ ಹಯವದನ
ಆದಿಮೂರುತಿಯೆ ದಯವಾಗೊ　೧

ಕೂರ್ಮಾವತಾರದಿ ಆ ಗಿರಿ ಯೆತ್ತಿದಿ
ಪ್ರೇಮದಿ ಸುರರಿಗೆ ಅಮೃತವ
ಪ್ರೇಮದಿ ಅಮೃತವನಿಕ್ಕಿದೆ ಹಯವದನ
ಸ್ವಾಮಿ ನೀ ಎನಗೆ ದಯವಾಗೊ　೨

ಕ್ರೋಡ ರೂಪಿಲಿ ಬಂದು ಮೂಢ ದೈತ್ಯನ ಕೊಂದು
ರೂಢಿಯು ನೆಗಹಿ ತಂದಿತ್ತೆ

ರೂಢಿಯು ನೆಗಹಿ ತಂದಿತ್ತ ಹಯವದನ
ಪ್ರೌಢ ನೀ ಎನಗೆ ದಯವಾಗೊ ೩

ಶಿಶುವ ಬಾಧಿಸುತಿಪ್ಪ ಕಶಿಪುವ ಖಂಡಿಸಿ
ಕುಶಲದಿ ಕರುಳ ಮಾಲೆಯ
ಕುಶಲದಿಂ ಮಾಲೆಯ ಹಾಕಿದ ಹಯವದನ
ಬಿಸಜಾಕ್ಷ ಎನಗೆ ದಯವಾಗೊ ೪

ವಾಮನ ರೂಪಿಲಿ ಭೂಮಿ ಈರಡಿ ಮಾಡಿ
ವ್ಯೋಮಕ್ಕೆ ಚರಣವ ನೀಡಿದೆ
ವ್ಯೋಮಕ್ಕೆ ಚರಣವ ನೀಡಿದೆ ಹಯವದನ
ವಾಮನ ಎನಗೆ ದಯವಾಗೊ ೫

ಕೊಡಲಿಯ ಪಿಡಿದು ಕಡಿದೆ ದುಷ್ಟನೃಪರ
ಹಡೆದ ತಂದೆಯ ಮಾತು ಸಲಿಸಿದೆ
ಹಡೆದ ತಂತೆದೆಯ ಮಾತು ಸಲಿಸಿದೆ ಹಯವದನ
ಒಡೆಯ ನೀ ಎನಗೆ ದಯವಾಗೊ ೬

ಸೀತೆಗೋಸ್ಕರ ಪೋಗಿ ಸೇತುವೆ ಕಟ್ಟಿದೆ
ಭೂತ ರಾವಣನ ಮಡುಹಿದೆ
ಭೂತ ರಾವಣನ ಮಡುಹಿದೆ ಹಯವದನ
ಖ್ಯಾತ ನೀ ಎನಗೆ ದಯವಾಗೊ ೭

ಗೊಲ್ಲರೊಡನೆ ಆಡಿ ಖುಲ್ಲ ಕಂಸನ ಕೊಂದೆ
ಮಲ್ಲರೊಡನೆ ಕಾದಿ ಮಡುಹಿದೆ
ಮಲ್ಲರೊಡನೆ ಕಾದಿ ಮಡುಹಿದೆ ಹಯವದನ
ವಲ್ಲಭ ಎನಗೆ ದಯವಾಗೊ ೮

ತ್ರಿಪುರರ ಸತಿಯರಿಗುಪದೇಶವನಿಕ್ಕಿ
ತ್ರಿಪುರರನೆಲ್ಲ ಮಡುಹಿದೆ
ತ್ರಿಪುರರನೆಲ್ಲ ಮಡುಹಿದೆ ಹಯವದನ
ನಿಪುಣ ನೀ ಎನಗೆ ದಯವಾಗೊ ೯

ವಾಜಿಯನೇರಿ ರಾವುತನಾಗಿ ನೀ ಬಂದೆ
    ಮೂಜ್ಜಗಕೆ ಕಲ್ಕಿ ಎನಿಸಿದೆ
ಮೂಜ್ಜಗಕೆ ಕಲ್ಕಿ ಎನಿಸಿದೆ ಹಯವದನ
    ಭೋಜ ನೀ ಎನಗೆ ದಯವಾಗೊ ೧೦

ವಾದಿರಾಜಗೊಲಿದು ಸ್ವಾದಿ ಪುರದಿ ನಿಂದು
    ವೇದದ ಕಥೆಗಳ ನರುಹಿದೆ
ವೇದದ ಕಥೆಗಳ ನರುಹಿದೆ ಹಯವದನ -
    ಮೇಲಾಪುರಿ ಚೆನ್ನ ದಯವಾಗೊ ೧೧

೨೪೪ ರಾಗ ನೀಲಾಂಬರಿ ರೂಪಕತಾಳ

ನಾರಾಯಣ ನಾರಾಯಣ ನಾರಾಯಣ
ನಳಿನೋದರ ನಾರದ ಪ್ರಿಯನಾಮ ಜಯ
ನಾರಾಯಣ ನರಕಾಂತಕ ಪ

ಸುರ ಸಂಚಯ ಸುಖ ಕಾರಣ
    ದಿತಿಜಾಂತಕ ದೀನಶರಣ
ಪರತಃಪರ ಪಾಂಡವ ಪ್ರಿಯ
    ಪರಿಪೂರ್ಣ ಪರಮ ಜಯ ೧

ಅಘಕುಲವನದಾವಾನಲ
    ಅಗಣಿತ ಗುಣಗಣ ನಿರ್ಮಲ
ತ್ರಿಗುಣಾತೀತ ತ್ರಿಭುವನ
    ತ್ರಿದಶೇಶ್ವರ ವಂದ್ಯ ಜಯ ೨

ಅತಿ ಮೋಹನ ಚರಿತ ನಮೋ
    ಅತಿ ಸದ್ಗುಣ ಭರಿತ ನಮೋ
ಹತಕಲ್ಮಷ ಹಯವದನ
    ಹರಿಹಯರಿಪು ಹರಣ ಜಯ ೩

೨೫೯ ರಾಗ ಸೌರಾಷ್ಟ್ರ ಆದಿತಾಳ

ನಾರಾಯಣನ ನೆನೆ ನೀ ಪ
ನಾರಾಯಣನ ಮನ್ನಿಸು ವರ್ಣಿಸು
ಆರಾಧನೆಗಳ ಮಾಡುತ ಪಾಡುತ
ನೀರಾಜನದಿಂದ ಅರ್ಚಿಸು ಮೆಚ್ಚಿಸು
ಪಾರಾಯಣ ಪ್ರಿಯನ ಅ

ಶ್ರವಣ ಶ್ರವಣ ಮನನ ನಿಧಿಧ್ಯಾಸನ
ಆ ವಿಷ್ಣುವಿನ ಭಕ್ತಿ ಮಹಪ್ರಸಾದಂಗಳು
ಕೈವಲ್ಯ ಪದಕೆ ಇಕ್ಕಿದ ನಿಚ್ಚಣಿಕೆಯೆಂದು
ಭಾವಜ್ಞರು ಪೇಳ್ವರು
ಜೀವನೆ ಜವನ ಬಾಧೆಗಳನ್ನು ತಪ್ಪಿಸಿ
ಪಾವನ ವೈಕುಂಠ ಪುರದೊಳಗೆಂದೆಂದು
ಆವಾಸವನು ಮಾಡಿ ಸುಖಿಸಬೇಕಾದರೆ
ಸೇವಿಸು ವೈಷ್ಣವರ ೧

ಲೋಕದಿ-''ವರಂ ವರಯ ಭದ್ರಂತೇ
ಋತೇ ಕೈವಲ್ಯಮಾತ್ಮನಃ
ಏಕ ಏವೇಶ್ವರಸ್ತಸ್ಯ ಭಗವಾನ್
ವಿಷ್ಣುರವ್ಯಯ'' ಎಂಬ
ಈ ಕಲಿಯುಗದಲ್ಲಿ ಬೇಕಾದ ಪುರಾಣ
ವಾಕು ವಿವೇಕದಿ ಮನದಿ ವಿಚಾರಿಸಿ
ಸ್ವೀಕರಿಸು ವೈಷ್ಣವರ ಮತವ ನಿ
ರಾಕರಿಸನ್ಯ ಮತವ ೨

ದ್ವಾರಾವತಿಯ ಗೋಪಿ ಚಂದನದಿಂದ
ಶ್ರೀರಮಣನ ವರ ನಾಮವ ನೆನೆದೆರ
ಡಾರು ಊರ್ಧ್ವ ಪುಂಡ್ರಗಳ ಧರಿಸೆಂದೆಂದು
ವೀರ ವೈಷ್ಣವ ಗುರುವ

ಸೇರಿ ಸಂತಪ್ತ ಸುದರುಶನ ಶಂಖವ
ಧಾರಣವನು ಭುಜಯುಗದೊಳು ಮಾಡಿ ಮು
ರಾರಿಯ ಮಂತ್ರಗಳವರಿಂದಲಿ ಕೇಳಿ
ಓರಂತೆ ಜಪಿಸುತಲಿ ೩

ಕಂದ ಬಾರೆಂದರೆ ನಂದನಿಗೊಲಿದಿಹ
ಕುಂದು ಕೊರತೆ ಬಂದರೆ ನೊಂದುಕೊಳ್ಳನು
ಇಂದಿರೆಯರಸ ಮುಕುಂದನೆ ಮುಕುತಿಯಾ
ನಂದವ ನೀವ ದೇವ
ಸಂದೇಹವಿಲ್ಲದೆ ಒಂದೆ ಮನದಿ ಗೋ
ವಿಂದನ ನೆನೆದ ಗಜೇಂದ್ರನಿಗೊಲಿದ ಉ
ಪೇಂದ್ರನ ಶುಭಗುಣ ಸಾಂದ್ರನ ಯದುಕುಲ
ಚಂದ್ರನ ವಂದಿಸಿರೊ ೪

ತುಷ್ಟನಹನು ಎಳ್ಳಷ್ಟು ಮುಂದಿಟ್ಟರೆ
ಅಷ್ಟಿಷ್ಟು ಎನ್ನದೆ ಸಕಲೇಷ್ಟಂಗಳ
ಕೊಟ್ಟು ಕಾವನು ಶಕ್ರನಿಗೆ ತ್ರಿವಿಷ್ಟಪ
ಪಟ್ಟವಗಟ್ಟಿದವ
ನಿಷ್ಠುರನಲ್ಲ ವಿಶಿಷ್ಟರಿಗೊಲಿದಿಹ
ದುಷ್ಟರ ತರಿದಟ್ಟಿದ ಜಗಜಟ್ಟಿ ಅ
ರಿಷ್ಟ ಮುಷ್ಟಿಕಾದ್ಯರ ಹುಡಿಗುಟ್ಟಿದ
ವಿಠ್ಠಲ ಬಲು ಧಿಟ್ಟ ೫

ಆವನ ಪಕ್ಷ ಬಲಕ್ಕಿದಿರಿಲ್ಲ ಕೇ
ಳಾವನ ಕುಕ್ಷಿಯೊಳಕ್ಕು ಜಗತ್ರಯ
ಆವನು ರಕ್ಷಿಪ ಶಿಕ್ಷಿಪನೋ ಮ
ತ್ತಾವನು ಪಾವನನೋ
ಆವನ ಶಿಕ್ಷೆಗೆ ಮಿಕ್ಕವರಿಲ್ಲ ಕೇ
ಳಾವನುಪೇಕ್ಷೆ ಕುಲಕ್ಷಯವೆನಿಪುದು

ಆವಸುರುಕ್ರಮ ವಿಕ್ರಮನೆನಿಸಿದಾ
ದೇವನಿಗಾವನೆಣೆ ೬

ಓಡುವ ಅಡಗುವ ದೇವರೆ ಬಲ್ಲರು
ಕೊಡುವ ನೋಡುವ ಮುಕುತರೆ ಬಲ್ಲರು
ಬೇಡುವ ಮುನಿಗಳೆ ಬಲ್ಲರು ಅವನೊಡ
ನಾಡುವ ರಮೆ ಬಲ್ಲಳು
ಊಡುವ ಪಾಡುವ ಯಶೋದೆ ಬಲ್ಲಳು
ಕಾಡುವ ಖೂಳರ ಆಡುತ ಕೆಡಹಿದ
ನಾಡೊಳು ಶರಣರ ಕೇಡು ಕಳೆವ ಕೃಷ್ಣ
ಗೀಡೆನ್ನದಿರು ಮೂಢ ೭

ಹರಿ ನಿರ್ಮಾಲ್ಯವ ಶಿರದಿ ಧರಿಸುತಿರು
ಹರಿ ನೈವೇದ್ಯವ ಭುಂಜಿಸುತಿರು ನಿತ್ಯ
ಇರುಳು ಹಗಲು ಹರಿ ಸ್ಮರಣೆಯ ಬಿಡದಿರು
ದುರುಳರ ಕೂಡದಿರು
ಹರಿಪದ ತೀರುಥ ನೇಮವ ಬಿಡದಿರು
ಹರಿ ಪರದೇವತೆ ಯೆಂದರುಪುತಲಿರು
ಗುರು ಮುಖದಿಂದ ಸಚ್ಛಾಸ್ತ್ರ ಪುರಾಣವ
ನಿರುತದಿ ಕೇಳುತಿರು ೮

ಸಿರಿದೇವಿಯಾವನಿಗರಸಿ ಸುರರ ಗುರು
ವಿರಂಚಿಪವನರು ಆವನ ಕುವರರು
ಉರಗಾಧಿಪ ನಾವನ ಮಂಚ ವಿಹಗೇ
ಶ್ವರನಾವನ ವಾಹನ
ಪುರಹರ ನಾವನುಂಗುಟ ನೀರ ಪೊತ್ತ ನಿ
ರ್ಜರ ಪತಿಯಾವನ ಚರಣ ಸೇವಕನಾದ
ಸುರರೊಳಗಾಹಯವದನಗಿನ್ನಾರನು
ಸರಿಯೆಂದುಸುರುವೆನ್ನೆಯು ೯

೫೬ ರಾಗ ರೇಗುಪ್ತಿ ಅಟತಾಳ

ಈತನೇ ಕಾಣಿರೋ ಮಧ್ವಮುನಿ
ಈತನೇ ಕಾಣಿರೋ ಪ

ಪರಿಪರಿ ಶ್ರುತಿಗಳೆಂಬುವ ಗುಹೆಗಳಲ್ಲಿ
ಕೇ-ಸರಿಯಂದದಿ ಚರಿಸುತ್ತ
ಹರಿಯೆ ಸರ್ವೋತ್ತಮನೆಂಬ ಘೋಷಗಳಿಂದ
ದುರುಳ ವಾದಿಗಳೆಂಬ ನರಿಗಳೋಡಿಸಿದಾತ ೧

ಸಕಲಾಗಮಗಳೆಂಬ ಶರಧಿಯೊಳಗೆ ಬಲು
ಯುಕುತಿಯಿಂದಲಿ ಮಥಿಸಿ
ಅಕಳಂಕ ಶ್ರೀಕೃಷ್ಣ ಎಂಬ ರತ್ನವ ಪಡೆದು
ಮುಕುಟದೊಳಿಟ್ಟು ಲೋಕದಿ ಮೆರಸಿದಾತ ೨

ವೇದಸಾರವಾದ ಊಶತತ್ವವೆಂಬ
*ಸುಧೆಯು ಕಲ್ಪಿಸಿಕೊಂಡು
ಆದಿಮೂರುತಿ ಶ್ರೀ ಹಯವದನನ ಪಾದ
ಆ-ರಾಧಕರಿಗಿತ್ತು ಮೋದಪಡಿಸಿದಾತ ೩

೫೭ ರಾಗ ಸೌರಾಷ್ಟ್ರ ಝಾಪುತಾಳ

ಮುಂದು ಹಿಂದು ಎಂದೆಂದಿಗು ಗೋ
ವಿಂದನೆ ಎನಗೆ ಬಂಧು ಪ
ಇಂದು ಇವರು ಎಲ್ಲ - ಅಂದಿಗೆ ಒಬ್ಬರು ಇಲ್ಲ ಅ

ಮನೆಯೆಂಬೋದೆ ಸುಮ್ಮನೆ
ಮಕ್ಕಳೆಂಬೋದೆ ದಂಧಣೆ

---

*ಅಮೃತ ಕಲ್ಪಿಸಿಕೊಂಡು (ಪಾಠಾಂತರ)

ಹಣವೆಂಬೋದೆ ಬಲು ಬೇನೆ
ಹಾರಿಹೋಗುವನು ತಾನೆ ೧

ಮಂದಗಮನೇರ ಕೂಡಿ
ಮರುಳಾಗಲಿ ಬೇಡ
ಮುಂದೋರದಂತೆ ಮಾಡಿ
ಮೋಸಹೋಗಲಾಡಬೇಡ ೨

ಪರಧನ ಪರಸತಿ
ಪರಕ್ಕಾಗದು ಗತಿ
ಸಿರಿಹಯವದನನ
ಚರಣವ ನಂಬಿ ಮುನ್ನ ೩

೫೮ ರಾಗ ಕಾನಡ ಅಟತಾಳ

ಬಾರೊ ಮುರಾರಿ ಬಾಲಕಶೌರಿ ಪ
ಸಾರ ವಿಚಾರಿ ಸಂತೋಷಕಾರಿ ಅ

ಆಟಸಾಕೇಳೊ ಮೈಯೆಲ್ಲ ಧೂಳೊ
ಊಟ ಮಾಡೇಳೊ ಕೃಷ್ಣ ಕೃಪಾಳೊ ೧

ಅರುಣಾಬ್ಜ ಚರಣ ಮಂಜುಳಾಭರಣ
ಪರಮ ವಿತರಣ ಪನ್ನಂಗಶಯನ ೨

ಮನೆಗೆದ್ದು ಬಾರೊ ಕೊನೆಗೈಯ ತೋರೊ
ಚಿನುಮಯ ಬಾರೊ ನಗೆಮುಖ ತೋರೊ ೩

ವೆಂಕಟರಮಣ ಸಂಕಟ ಹರಣ
ಕಿಂಕರಾಮರ ಗಣ ವಂದಿತ ಚರಣ ೪

ಅರವಿಂದನಯನ ಶರದೇಂದು ವದನ
ವರ ಯದುಸದನ ಸಿರಿಹಯವದನ ೫

೬೯ ರಾಗ ಕಾಂಭೋದಿ ಝಂಪೆತಾಳ

ತಾಳುವಿಕೆಗಿಂತ ತಪವು ಇಲ್ಲ ಪ
ಕೇಳಬಲ್ಲವರಿಗೆ ಹೇಳುವೆನು ಸೊಲ್ಲ ಅ

ದುಷ್ಟ ಮನುಜರು ಪೇಳ್ವ ನಿಷ್ಠುರದ ನುಡಿತಾಳು
ಕಷ್ಟಬಂದರೆ ತಾಳು ಕಂಗೆಡದೆ ತಾಳು
ನೆಟ್ಟ ಸಸಿ ಫಲ ಬರುವತನಕ ಶಾಂತಿಯು ತಾಳು
ಕಟ್ಟು ಬುತ್ತಿಯು ಮುಂದೆ ಉಣಲುಂಟು ತಾಳು ೧

ಹಳಿದು ಹಂಗಿಸುವಂಥ ಹಗೆಯ ಮಾತನು ತಾಳು
ಸುಳಿನುಡಿ ಕುಹಕ ಕುಮಂತ್ರವನು ತಾಳು
ಅಳುಕದಲೆ ಬಿರಿಸು ಬಿಂಕದ ನುಡಿಯ ನೀ ತಾಳು
ಹಲಧರಾನುಜನನ್ನು ಹೃದಯದಲಿ ತಾಳು ೨

ನಕ್ಕು ನುಡಿವರ ಮುಂದೆ ಮುಕ್ಕರಿಸದೆ ತಾಳು
ಅಕ್ಕಸವ ಮಾಡುವರ ಅಕ್ಕರದಿ ತಾಳು
ಉಕ್ಕೊ ಹಾಲಿಗೆ ನೀರನಿಕ್ಕುವಂದದಿ ತಾಳು
ಪಕ್ಷೀಶ ಹಯವದನ ಶರಣೆಂದು ಬಾಳು ೩

೭೦ ರಾಗ ಕಲ್ಯಾಣಿ ಆದಿತಾಳ

ಹರಿಯ ಭಜನೆಮಾಡೊ ನಿರಂತರ ಪ
ಪರಗತಿಗಿದು ನಿರ್ಧಾರ ನೋಡೊ ಅ
ಮೊದಲೆ ತೋರುತದೆ ಮಧುರ ವಿಷಯ ಸುಖ

ಕಡೆಯಲಿ ದುಃಖ ಅನೇಕ ೧
ವೇದ ಶಾಸ್ತ್ರಗಳ ನೋಡಿದರೇನು
ಸಾಧನಕಿದು ನಿರ್ಧಾರ ೨

ಸಾರವೊ ಬಹು ಸಂಸಾರ ವಿಮೋಚಕ
ಸೇರೋ ಹಯವದನನ್ನ ೩

## ೬೧ ಗುಂಡಕ್ರಿಯ

ಬರಿದೆ ಸಂಸಾರದಿ ಜರಿದೆ ಮರೆದೆ
ಹರಿ ನಿನ್ನ ಅನುಸರಿಸುತಿರದೆ
ಕರಿದೇವ ದೇವಯೆನ್ನೆ
ಕರುಣಿ ಕಣ್ತೆರೆದೆ ತರಿದೆ ಮಕರಿಯ
ಮುಖವ ನೀ ಬೇಸರದೆ
ವರದೇಶ ಪಾಹಿಯೆನೆ ಅಜಮಿಳನ
ಪೊರೆದೆ ಮುರಿದೆ ಯಮಭಟರ
ತರಿದೆ ಪಾಶಗಳ ಕರೆದೆನ್ನ ಹಯವದನ
ಒರೆದೆ ತತ್ವಗಳ ಮರೆದೆ ಮಹಿಮೆಯ
ನಿನಗಿದೊಂದರಿದೆ ೧

ದೇಹವಿಲ್ಲದೆ ಬೇರೆ ಜೀವವಿಲ್ಲೆಂಬನೆ
ಮೋಹದ ನಿನ್ನ ಹೆಂಡತಿ ಸಾಯಲೇತಕೆ
ಹಾ ಹಾ ಎಂದಳುವೆ ಪಾಪಿ
ನೇಹ ಪಾತುರ (ಪಾತ್ರ) ವಾದ ಪೂರ್ವ ಕಾಯಕ್ಕೇನು
ಹಾನಿ ಬಂದಿತು ಪೇಳು
ಬಾಹುಗಳಿಂದದ ನಪ್ಪಿ ರಮಿಸಬೇಕು
ನೀ ಹೇಳಿದ ಪಂಥಕೆ
ಶ್ರೀ ಹಯವದನ ಇಂತಲ್ಲದಿದ್ದರೆ ನಗುವ
ಈ ಹದನರಿಯದವನ ಮತ ದುರ್ಮತ
ಸಾಹಸ ಸಾಕು ಸಾಕು ೨

ಎಲ್ಲಪಿದ್ದರು ಶ್ವಾಸವೊಂದಿಲ್ಲ ವೆಂಬನೆ
ಒಲ್ಲಿದ ಡೊಂಬನ ಸತಿ ಪವನವ ಕಟ್ಟಿ
*ನಲ್ಲಿವಾಗಂಬರದಿ (*ನಲಿವಾಗ)

ಕುಳ್ಳಿರ್ದಧಾರವು ಕಡಿರ್ದಮೇಲೆ ತಾ
    ನಿಲ್ವಳು ಚಲಿಸದಂತೆ
ತೊಲ್ಲಗಿದ (ತೊಲಗಿದ) ಸುಮತ್ತ್ವದೆಲ್ಲೇದೆಂಬ ಯುಕ್ತಿ
    ಸಲ್ಲದಲ್ಲ ನಿನಗೆ
ಬಲ್ಲವಧೂತರು ಪ್ರಾಣಮಾರ್ಗವ ತಡೆದು
ಕೆಲ್ವ ಹಯವದನನ ಮೆಚ್ಚಿಸಿ ಶೈಲಾಗ್ರದಿ
    ತಲ್ಲೆಯೂರಿ (ತಲೆಯೂರಿ) ತಪಿಸರೆ ೩

ಸ್ಯಾದೆಂಬವಾದಿ ನಾಪೆಂಬ ಪ್ರಮೇಯವ
ಸ್ಯಾದೆನ್ನಬೇಕಾಗಿ ವಾದಿಸುವೆಯೆಂತೊ
    ಬಾಧಿಪ ಮಾತನಜ್ಞಾ
ಬೋಧ ವಿಗ್ರಹ ತಾನೆಬಾರದೆ ಬಿಡದು
    ಮೊದಲಿಗೆ ಸೋತೆಯಲ್ಲ
ಅವಿಯ ನರಿಯದವನ ಮತವಿನ್ನೆಂತೊ
    ಈ ಧರಾಂತಕೆ ಮೆಚ್ಚರು
ವೇದವ ನೊಯಿದು ವಿಧಿಗೆ ಬೋಧಿಸಿದ ದು
ರ್ವಾದಿ ಗಜೇಂದ್ರ ಪಂಚಾನನ ಹಯವದ
    ನಾದಿ ನಾರಾಯಣನು ೪

ತಾನೋರ್ವ ಸ್ವೈವರಾಚಾರ್ಯರೆಂಬ ಮತ
ಹೀನವೆಂಬನು ಮತ್ತೊಬ್ಬನ ನುಡಿಯೆಂತೊ
    ನಾನಾಯುಕ್ತಿಯ ಮಾಡುವ
ಜನನ ಮರಣ ಹಸಿವು ತೃಷೆ ನಾನಾ ವ್ಯ
    ಸನ ಸರ್ವರಿಗೆ ಸರಿ
ಮಾನವರೆಲ್ಲರು ಮರುಳರು ನಾನೇ ಪ್ರ
    ವೀಣನೆಂದರೆ ನಗರೆ

ಆಸೆಂಬಹಂಕೃತಿಯಿಂದ ಜಗದೊಳು
ನೀನೆ ಹೀನನಾಹೆ ಹಯವದನನ ಬಲ್ಲ
ಜಾಣ ಜನರ ಕೇಳು ೩೫

ತಾನೊಬ್ಬನೈದುಮತ ಜನರೊಡನೆ
ರಣರಂಗದಿ ನಿರುತ ಜಯಿಸುವುದೆಂತೈಯ
ನಾನಾ ವಚನಂಗಳು
ನಾನಾ ಯುಕ್ತಿಗಳೊಬ್ಬನ ಮಾತಿನಿಂದಲೆ
ಹೀನವಾಗಿ ಪೋಪುದೆ
ಅನಾದಿಯಾದ ವೇದವೆಂಬುದ ಬಲು ಪ್ರ
ವೀಣತೆ ಬಾರದಾಗಿ ಹಯವದನ
ತಾ ನಿಗಮವ ತಂದ ೬

ಇದ್ದ ದೇವ ಮಾನವರ ಮಾತಿನೊಳು
ಶ್ರದ್ಧೆಯ ಮಾಡುವರು ಲೋಕದವರು
ಬುದ್ಧ ಸ್ವರೂಪದಿಂದ
ಆದ್ಯನಾದ ನಾರಾಯಣನೆ ಬಂದಿಲ್ಲಿ
ಪೇಳ್ದ ಸಿದ್ಧಾಂತವನು
ಗದ್ದುಗೆಸ್ನವ ಮಾಡಲುದ್ಭವಿಸಿದ ಕಥೆ
ಸಿದ್ಧವಾದುದಿಲ್ಲವೆ
ಬುದ್ಧಿವಂತರೆಲ್ಲ ಪೇಳ್ದ ಪೇಳ್ದ ಪರಿ
ಶುದ್ಧ ಕಾರಣ ಶೃತಿಯೆನಿಪ ಹಯವದನ
ಸುದ್ಧರಿಸಿಪ ವಿದ್ಯೆಯ ೭

ತನ್ನ ಮೊಗವ ತಾ ಕಾಣಲರಿಯದಲೆ
ಇನ್ನರಿಯಸು ತಾಹ ಮನ್ನುಜ (ಮನುಜ) ಜಾತಿಯು
ಪೊನ್ನೆಮೊನ್ನೆಗೆ ಸರ್ವಜ್ಞ

ತನ್ನನ್ನೆ ಕೂಡಿರ್ದ ನಾಡಿಯ ತೋರಿಸಿ
ತನ್ನುವಿನ (ತನುವಿನ) ಸ್ಥಿತಿಯ
ಅನ್ಯರ ಕೇಳನೆ ಪಂಚಾಂಗದೊಂದೊಂದು
ದಿನ್ನದಿನ್ನ (ದಿನದಿನ) ನೋಡನೆ
ಎನ್ನಾಳ್ವ ಹಯವದನ ಕುದುರೆಮೊಗವಿ ವ್ಯಾ
ಖ್ಯಾನ್ನ ಮಾಡುವಗೆ ಕೊಡುವುದು ಕಾಣೊ
ಅನ್ನುಪಮ (ಅನುಪಮ) ಶಕುತಿ ೮

ಎಲ್ಲೆಲ್ಲಿ ತುಂಬಿದ್ದ ವಿಷ್ಣುವೆ ನೀನವರ
ಒಲ್ಲೆ ಬಲ್ಲೆ ವಿಶ್ವತಶ್ಚಕ್ಷು ನೀಗಡ
ತೋರಲಿ ತೋರದಿರಲಿ
ಬಲ್ಲೆ ಕೈವಲ್ಯವ ಕೊಡಲು ಬಿಡಲು
ನೀನೇಗಡ ಶರಣರಿಗೆ
ಒಲ್ಲಿದು (ಒಲಿದು) ಖುಲ್ಲರ ಕೊಲ್ಲುವುದು ಒಲ್ಲೆ
ಬಲ್ಲೆ ಮಾಯಾಪತಿಯೆ
ಕಲ್ಲುಕಂಭದಿ ಮೂಡಿದ ಭಕ್ತವತ್ಸಲ್ಲ
ಸಲ್ಲುವುದೊ ಹಯವದನ ಎನ್ನಾಳುವ
ಕರುಣಿ ನೀ ಬಲ್ಲೆಬಲ್ಲೆ ೯

ಶುದ್ರಶೋದನವೆಂಬ ಹೊನ್ನ ಗಂಡನ ಕಾಯ
ದರ್ಪವ ಸೆಳೆವ ಹೆಣ್ಣನೊಬ್ಬೊಬ್ಬರ
ಗುದ್ದಿಸಿ ಕೊಲ್ವಮಣ್ಣ
ತ್ರೊ-ರರ್ದು ಬಾಳುವ ಮಾನವನಾವ ಚ
ತುರ್ದಶಭುವನದೊಳು
ಹೊದ್ದದೆ ದುಷ್ಟ ವಾರಿಧಿ ಮಧ್ಯದಲ್ಲಿ
ಇದ್ದು ತನ್ನುದರದಲಿಪ್ಪ

ಪದ್ಮಿಯು ಸದ್ದೆಗೊಳ್ಳದೆ ಕುವರನ ನಾಭಿ
ಪದ್ಮದಿ ಪೆತ್ತ ಹಯವದನನೊಬ್ಬನೆ
ಗೆದ್ದ ಸಿದ್ಧಕಾಣಿರೊ ೧೦

ಮನೆಯ ಮೇಲಣ ಕಿಚ್ಚು ಮನೆಯೊಳಗಿನ ಕರ್ಮ
ಕನುಕೂಲವಾದ ಬಗೆಯ ಪೇಳುವೆ ವಾದಿ
ಕಾನನ ಮರದ ನೆಳಲು
ಜನಪದದೊಳಗಣ ತಾಪ ಕಳೆವುದೆ ಕ
ಳ್ಳನ ಕಳುಹದೆ ಶೂಲಕ್ಕೆ
ಅನಘರಿಗಪ್ಪಣೆ ಕೊಡುವ ಅರಸಿನಂತೆ
ಇನಿತು ಕಾರಣರಾಶಿಯು
ಘನತರ ಕಾರ್ಯ ಸರ್ವೇಶ್ವರ ನಮ್ಮ
ವಿನುತ ಹಯವದನ ನೊಲ್ಲದಿದ್ದರ ಮೇ
ಲಣ ಪದಕೆಂತೇರುವೆ ೧೧

ಕರ್ಮವೊಂದೇ ಸಾಕು ಬೊಮ್ಮವೇಕೆಂಬುವ
ನೀ ಮಹಿಯೊಳು ಯಜ್ಞಾದಿ ಸತ್ಕರ್ಮವ
ಸುಮ್ಮನೆ ಮಾಡುವನೆ
ನಿಮ್ಮ ಮುಖವ ಮಾಡಬೇಕೆಂಬ ಶ್ರುತಿ ನಮ್ಮ
ಬೊಮ್ಮವ ಪೇಳಿತಾಗಿ
ಅಮ್ಮಮ್ಮ ಸತ್ಯದ ನುಡಿ ತಪ್ಪಿದರೆ ಸಾಧ್ಯ
ಸಮ್ಮತಿಪ್ಪುದೇಕೊ
ಹೆಮ್ಮೆಯಬಿಡು ವಾದಿ ಹಯವದನನೆಂಬ
ಬೊಮ್ಮನ ನಂಬು ಕೈವಲ್ಯ ಬೇಕಾದರೆ
ಇಮ್ಮನ ಮಾಡಬೇಡ ೧೨

ಇನ್ನೊಬ್ಬವಾದಿ ಘಟ ಪಟಾದಿತತ್ವ
ವನ್ನು ನುಡಿವನ್ನ ಬಂಧ ಪರಿವುದೆಂತೊ
ಮಣ್ಣು ತಂದು ಶೋಧಿಸಿ
ಎನ್ನಿತಾಗಬೇಕೊ ಅನ್ನಿತವ ಕೂಡಿ
ನಿರ್ಣೈಸಿ ಘಟವ ಮಾಡ್ದ
ಜನ್ನಯ್ಯನೆಂಬ ಕುಂಬಾರನೇತಕೆ ಪೋಗ
ಉನ್ನಂತ ಮುಕುತಿ ಪಥಕ್ಕೆ
ಎನ್ನೊಡೆಯ ಹಯವದನ ಇಂತಿವರ ಯುಕ್ತಿ
ಶೂನ್ಯಮಾತಿಗೆ ಮೆಚ್ಚ ನಾನ್ಯಃಪಂಥವೆಂಬ
ಆಮ್ನಾಯವ ಪೇಳ್ದವ ೧೩

ತನ್ನ ಸಾಲಿಗೆಯನು ತಾ ಕತ್ತರಿಸುವವ
ಇನ್ನೇನು ನುಡಿವನೊ ಕಡಿವ ಕೊಡಲಿಯನು
ಮೊನ್ನೆಯ (ಮೊನೆಯ) ಮುರಿದವನು
ವನ್ನದ (ವನದ) ತರುಗಳ ಕಡಿವನೇನೋ ಮೂಢ
ನಿನ್ನ ವೇದಾಂತವನು
ಮನ್ನಿಸದೆ ಪುಸಿಯೆಂಬ ವಾದಿ ಜಗ
ವನ್ನು ಇನ್ಯಾತರಿಂದ
ಬನ್ನಬಡಿಸಿ ಕೆಡಿಸುವೆ ನಿನ್ನರ್ಥವ
ಇನ್ನಂತು ಸಾಧಿಪೆ ಹಯವದನವರೊಳು
ಎಂತು ನಿಂತು ವಾದಿಪೆ ೧೪

ನೇಹನಾನಾಸ್ತಿ ಕಿಂಚನವೆಂಬ ಶ್ರುತಿ ನಮ್ಮ
ಶ್ರೀಹರಿಯಲ್ಲಿಪ್ಪ ಗುಣರೂಪಂಗಳ
ವ್ಯೂಹಕ್ಕೆ ಭೇದವಿಲ್ಲ
ಸಾಹಸ ಸತ್ವ ನಿತ್ಯತ್ವ ಮಹತ್ವ
ವೆಲ್ಲವು ಸಮವೆಂದು

ಊಹಿಸಿ ಏಕಮೇವಾ ದ್ವಿತೀಯ ಯೆಂ
ಬೀಹಾಡು ಲಯಕಾಲದಿ
ಈ ಹದಿನಾಲ್ಕು ಲೋಕವಿಲ್ಲೆಂದೈಸೆ
ಮೋಹವ ಬಿಡು ಹಯವದನ ಮಾಡುವ ಜಗ
ದಾಹಾನಿ ಯಾತರಿಂದ ೨೪

ಅನ್ಯವಿನಾಶವೆಂಬ ಶ್ರುತಿಯು ಕೇಳು ಪ್ರಾಪು
ಪರ್ಣ ಸಾಯುಜ ಸಹವೆಂಬ ವೇದವ ನಂಬು
ನಿನ್ನ ಬೆನ್ನ ಬಿಡದಿಹ
ಅನ್ನೇಕ (ಅನೇಕ) ಜನ್ಮದ ಕ್ಲೇಶವ ನೋಡು ಇ
ನ್ನನ್ಯವೆಂದರೆ ಪುಸಿಯು
ಅನ್ನಶ್ಚನ್ನನ್ಯೋ ಎನಿವ ಮುಕುಂದನು
ಪೂರ್ಣ ಸುಖನಲ್ಲವೆ
ಮಾನ್ಯ ಹಯವದನ್ನ ತ್ರಿವಿಕ್ರಮ
ನನ್ನು ದಾಸೋಹಂ ಎನ್ನೊ ಶಾಸ್ತ್ರೋಕ್ತಿ
ಮನ್ನಿಸಿ ಬಾಳೊ ಜೀವ ೨೫

ಅರಸಿನ ಬಳೆಂದು ಬಾಳುವ ಮನುಜರ
ಸ್ಥಿರತರ ಭಾಗ್ಯವ ನೀವೆಲ್ಲ ನೋಡಿರೊ
ಅರಸು ತಾನೆಂಬವಗೆ
ತೆರತೆರದಲಿ ಬಾಹ ಕ್ಲೇಶ ರಾಶಿಗಳ
ನೆರೆಮನೆಯಲ್ಲಿಕ್ಕೆಂಬ
ಹರಿತಾನೆ ಯೆನ್ನಲು ಪೌಂಡ್ರಕದನುಜನ
ಶಿರವ ಚೆಂಡಾಡಿದನು
ನರನಹಂಬ್ರಹ್ಮ ಎನೆ ಕೊಲ್ಲದುಳಿಪನೆ
ಸರ್ವೇಶ್ವರ ವೇದವ ತಂದ ಹಯವದನ
ಇಂತೆಂಬರ ಕೊಲ್ಲೆಂಬ ೨೬

ಲೋಕಮಾತೆ ಯೆಂದು ಲಕುಮಿಯು ನಾಮ ಅಂ
ಬಿಕ ದೇವಿಯೆಂದು ಗೌರಿಯು ಪೆಸರು ವಿ
ವೇಕಿಗಳೆಲ್ಲ ಕೇಳಿ
ಈ ಶ್ರುತಿಗಳಚ್ಯುತೋ ಹಂ ಶಿವೋಹಂ ಎಂ
ದೇಕೆ ಪೇಳುವರ್ಯೆಯು
ಜೀಕಾಮಿತೇಸೊ ಮಾತೃಗಾಮಿ ಯೆಂಬ
ಈ ಕಷ್ಟದ ಬೈಗಳು
ಶ್ರೀಕಾಂತ ಹಯವದನ ಯೋಸಃಪಿತಾ ಯೆಂಬ
ಸೂಕ್ತಕ್ಕೆ ದೇವತೆಯಾದ ಕಾರಣ
ಇವನ ಕುವರರು ನಾವು ೧೮

ಅದ್ವೈತವಾದಿ ನಿನ್ನ ವಿದ್ವನ್ಮತದಲ್ಲ
ಬುದ್ಧದೇವಗೆ ಪೆಸರಿದ್ದ ಕಾರಣದಿಂದ
ಅದ್ವಯವಾದಿ ಯೆಂದು
ರಾದ್ಧಾಂತದ ಗುರು ಶುದ್ಧೋದನ ಮುನಿ
ಪೇಳಿದ ಬುದ್ಧ ಮತವ
ಶುದ್ಧಾಗಿ ಶೋಧಿಸಿ ಸಿದ್ಧಾಂತ ಕಥೆಗಳ
ಬದ್ಧವಾದುದಿಲ್ಲವೆ
ಬುದ್ಧಿವಂತರು ಕೂಡಿ ದ್ವೈತ ಮತವನ್ನೆ
ಹೊದ್ದಿ ಬದುಕಿ ಸಿರಿ ಹಯವದನನ ಪಾದ
ಪದ್ಮವನ್ನೆ ಭಜಿಸಿರೊ ೧೯

ವ್ಯೋಮ ಕೇಶನೊಬ್ಬ ವ್ಯೋಮ ಪಾದನೊಬ್ಬ
ಭ್ರಾಮಕವರ ವೀವನೊಬ್ಬ ಕೊಲ್ಲುವನೊಬ್ಬ
ಕಾಮದಕ್ಷಾದಿಗಳ
ಸೀಮೆಯರಿಯೆ ಕೊಂದವನೊಬ್ಬ ರಕ್ಷಿಸಿ
ದಾ ಮಹಾ ಪುರುಷನೊಬ್ಬ

ರಾಮಾದ್ಯವತಾರದಿಂದ ಮುರಿದ ಬಿಲ್ಲು
ಆ ಮಹೇಶನದಲ್ಲವೆ
ಶ್ರೀಮುಡಿಯಲಿ ವಿಷ್ಣುಪದಿಯೆಂಬ ನದಿಪೊತ್ತ
ಆ ಮಹಾದೇವ ಹಯವದನನೆಂತಾಹ ನೀ
ಮಾನವ ನೆಂತಾಹೆಯೊ ೨೦

ಶ್ರುತಿ ಶೃತಂಗರ್ತ ಸದಾಯುವಾನೆಂ
ದಾ ಹರನ ಕೂಡೆ ವೇದ ಪೇಳಿತಾಗಿ
ಆ ಮಹಾ ಪುರುಷನೊಬ್ಬ
ಮಹಿಮೆಯುಳ್ಳ ನರಸಿಂಹನ ತನ್ನ ಹೃ
ದಯ ಗುಹೆಯೊಳಗಿಪ್ಪನ
ಸಿಂಹನಂತೆ ಭಯಂಕರ ವೀವನ ಸ್ತುತಿ
ಗಾಹಂತ ಹರಿಯೆ ಬೇಕು
ಶ್ರೀ ಹಯವದನನೆ ಇವನೆಂದು ಸಿದ್ಧ ನ
ವ್ಮಾ ಹಿರಿಯರ ಮತವನು ಜರಿವೆಯೆಂತೊ
ಸೋಹಂ ಎಂಬ ಮನುಜ ೨೧

ನೀನಾಯಿ ಎಂದರೆ ಕೋಪವೇಕೋ ಮನುಜ
ಹೀನರೈಕ್ಯವ ಪೇಳಲದು ಬೈಗಳಾದರೆ
ಮನೆಮನೆಗಳಿಗೆ ಪೋಗಿ
ದೀನತನವ ತೋರಿ ತನುವ ಪೊರೆಯುವ
ನಾನಾ ಜೀವರೈಕ್ಯವ
ಶ್ರೀ ನಾಥಗೆ ಪೇಳ್ವುದೇನು ಬೈಗಳೊ ಮೂಢ
ಗುಣ ಶೂನ್ಯನೆಂಬುವುದು
ಮಾನವರಿಗೆ ಬೈಗಳಾದರೆ ಹಯವ
ದನಗೆ ಗುಣವಿಲ್ಲವೆಂಬೋದು ಬೈಗಳ
ಲ್ಲೇನೆಲೊ ಬಲುಮೂಢ ೨೨

ನರರೊಳು ಪರನಿಂದೆ ಸಲ್ಲದು ಸರ್ವೇ
ಶ್ವರನ ನಿಂದಿಸುವುದು ಧರ್ಮವೇನೋ ಸ
ಜ್ಜನ ರೊಡನಾಡೆಂದೆಂದು
ದುರುಳರ ಕೂಡಣಾಟವ ಬಿಡು ಹರಿಯ ಶ್ರೀ
ಚರಣ ಸೇವೆಯ ಮಾಡು
ದುರಿತ ರಾಶಿಗಳ ನೀಡ್ಯಾಡು ಭಕ್ತಿಯ ಬೇಡು
ಪರಮ ಪುರುಷನ ನೋಡು
ಸಿರಿ ಹಯವದನನ ಕರುಣದಿಂದಲಿ ನಿನಗೆ
ಸಿರಿ ಸೇರುತಿಪ್ಪುದು ಪರಗತಿಯುಪ್ಪುದು
ನಿರುತ ಸುಖವು ತಪ್ಪದು ೨೩

ಶೋಧಿಸೆ ಬಂದ ಭೃಗುವನರಿಯದೆ ವೃಥಾ
ಕ್ರೋಧವ ಮಾಡಿದ ಕಾರಣ ವಿಧಿ ರುದ್ರಾ
ರಾಧಿಕ್ಯರಾದುದಿಲ್ಲ
ವೇದ ಈಶ ಸರ್ವಜ್ಞ ಎಂದು ಪೇಳ್ವ
ಆದಿವಸ್ತುವ ಕಾರ್ಯವು
ಬೋಧವಿಲ್ಲದೆ ಮಾನವರಂತೆ ಇರುತಿಪ್ಪ
ಆದೇವ ರೆಂತಪ್ಪರೈ
ಶ್ರೀಧವನೆದೆಯನೊದ್ದಾಗಲೆ ಸರ್ವ
ವೇದಿ ಹಯವದನಾದ ಕಾರಣ ಕೋಪಿ
ಸದೆ ಹೆದ್ದೈವನಾದ ೨೪

ಆವನ್ನ (ಆವನ) ರೋಮ ಕೂಪದೊಳಗೀ ಜೀವ
ರಾವಾಸವಾದ ಬ್ರಹ್ಮಾಂಡ ರಾಶಿಗಳು
ತೀವಿಪ್ಪ'ದ್ಯತ್ರಪ್ರಿಯಾ
ಹಿ ವಿಷ್ಣು ಪರಮಾಣ್ವಾದ್ಯ' ಎಂದು ಪೇಳ್ದ
ಶ್ರೀ ವೇದವ್ಯಾಸ ತಾನೆ

ಈ ವಿಷ್ಣು ರೋಮಕ್ಕೆಣೆ ಯಿಲ್ಲವೆನ್ನೆ ಈ
ದೇವಗಿನ್ನಾವನೆಣೆ
ಶ್ರೀ ವಾಸುದೇವ ಹಯವದನ ಸರ್ವೇಶ
ದೇವರೆಲ್ಲ ಇವನ ದಾಸ ದಾಸರಿನ್ನು
ವಿವಾದ ವ್ಯಾಕೊ ಜೀವ ೨೧೪

ಸ್ವರ್ಗಾದಿ ಸತ್ಯಾಂತಪಾದ ಮೇಲಣಲೋಕ
ಕಗ್ರಣಿಗಳಾದ ದೇವರ ನೋಡು ಮಧ್ಯದೊ
ಳೊಗ್ಗಿಹ ಭೂಲೋಕದಿ
ಮುಗ್ಗಿಹ ಮನುಷ್ಯರಾಶಿಯ ನೋಡು ಕೆ
ಳಗ್ಗಣ (ಕೆಳಗಣ) ಪಾತಾಳದಿ
ದುರ್ಗರ್ವಿ ದೈತ್ಯರ ನೋಡು ತ್ರಿವಿಧ ಜೀವ
ವರ್ಗ ಪದಾಗಮಕ್ಕೆ
ಸ್ವರ್ಗವೆ ಸಾಕ್ಷಿ ಎಲ್ಲದರಿಂದ ಮೇಲಣ
ದುರ್ಗಾಧಿಪತಿ ಹಯವದನನೊಬ್ಬನೆ ಸ
ರ್ವಾಗ್ರೇಸರ ಕಾಣಿರೊ ೨೬

ಮೂರ್ತಿಯ ನೋಡಲು ವಿಶ್ವತಶ್ಚಕ್ಷು ಎಂ
ಬುಕ್ತಿ ಯಥಾರ್ಥವಾದ ಶ್ರೀಹರಿಯ ಪಿರಿಯ
ವ್ಯಾಪ್ತಿಯ ನೋಡಲಾಗಿ
ತತ್ವವೆಷ್ಟೆಷ್ಟು ಅಷ್ಟಷ್ಟರಲ್ಲಿ ವೇ
ದೋಕ್ತಿಯಿಂದಲಿ ಸರ್ವ
ವ್ಯಾಪ್ತ ನಾರಾಯಣ ಸ್ಥಿತ ಎಂಬ ಶ್ರುತಿಗೀ
ನೀತಿಗೆ ಪ್ರತಿಯಿಲ್ಲ
ಖ್ಯಾತ ಗುಣಗಳಿಂದ ಅಪ್ರತಿಮಲ್ಲ ಶ್ರೀ
ನಾಥ ಹಯವದನನ ಮಹಿಮಾನಂತಗುಣ
ಯಾತಕಿಂತು ವಾದಿಪೆ ೨೭

ಆರು ಶಾಸ್ತ್ರಗಳ ಬಲ್ಲವರೆಲ್ಲ ಕೇಳಿರೊ
ನಾರಾಯಣನ ನಾರಿಯರಾದ ಧಾರುಣಿ
ಸಿರಿದೇವಿಯರಿವನ
ದೂರಿದಾಗಲೆ ನಿನಗೆ ದೂರವಾಗಲು ಕಾಲ
ನೂರಲು ನೆಲವಕಾಣೆ
ಬಾರದು ಬಾಯಿಗೆ ಕೂಳು ಇದೆಲ್ಲವು
ಆರೇನೆಂಬರು ಕೇಳ್ವೆಯು
ಊರೊಳಗಿನ ಪತಿವ್ರತೆಯರಿರವ ಕಂಡು
ಸಾರ ಹೃದಯರೆಲ್ಲ ಹಯವದನನ ಪಾದ
ಸರೋಜವನೆ ಸಾರಿರೊ ೨೮

ನರಕ ಕೂಪದೊಳೇಳುತ ಮುಳುಗುತ
ಹರಿದ್ವೇಷಿಗಳೆಲ್ಲ ಮಲ ಮೂತ್ರಗಳ ತಿಂದು
ಗಾರಾಹರೆಂದರಿಯು
ಪುರಾಣಭಾರತ ರಾಮಾಯಣಂಗಳ
ಹಿರಿಯರಿಂದಲಿ ಕೇಳಿ
ಓರಂತೆ ಶಾಸ್ತ್ರಂಗಳನೆಲ್ಲ ನೋಡಿ ವಿ
ಚಾರಿಸಿ ತಿಳಿದುಕೊಳ್ಳಿ
ನಾರಾಯಣನೆಂದು ಚೀರಿದ ಅಜಾಮಿಳ
ನೇರನೆ ಹಯವದನನ್ನರಮನೆಯ
ಸಾರಿ ತಾ ಬದುಕಿರನೆ ೨೯

ಆ ದೇವ ಈ ದೇವನೆಂದ್ಯಾಕೆ ಕಲಹ ನಾ
ನಾ ದೇಶದವರಿಗೆ ಬೇಡಿದಿಷ್ಟವ ನೀವ
ಸಾಧಿಸಿದ ಧನದಿ
ಈ ಧರೆಯೊಳಗಿರ್ದ ರಾಯಗೆ ಕೋಟಿ ದ್ರ
ವ್ಯಾದಿ ಕಡನಕೊಟ್ಟ

ಪಾದವ ಮುರಿದ ವೆಂಕಟಗಿರಿ ರಾಯನಂ
ಥಾ ದೇವನನ್ನು ತೋರೆಲೊ
ಶ್ರೀದೇವಿಯುರದ ತಿಮ್ಮಯ್ಯ ರಾಯಗೆ ಪ್ರತ್ಯ
ಕ್ಷವಿ ಎಣೆಗಾಣೆ ಹಯವದನ್ನನ
ಪಾದ ಪದುಮದಾಣೆ ೩೦

ಆವನನಾಭಿ ಕಮಲದಲ್ಲಿ ಪುಟ್ಟಿದ
ದೇವ ಪಿತಾಮಹ ಎನಿಸಿಕೊಂಬುವನಾಗಿ
ಜೀವರಾಶಿಗೆ ಎಲ್ಲ
ಈ ವಿಷ್ಣುವಿಗೆ ಆ ದಿವಿಜರೇನಾಹರೆಂದು
ಆವ ಸರ್ವೇಶನೆಂದು
ನೀವಿಟ್ಟ ಪಿಂಡವು ಆರಪಾಲಾಹುದೆಂದು
ಭಾವಜ್ಞರೆಲ್ಲ ಕೇಳಿ
ದೇವ ಹಯವದನನೊಲ್ಲದ ವಾದಿಗೆ
ತಾವುದಿಸಿ ತಾಯಿಲ್ಲ ಎಂಬ ಗಾದೆ ಬಹುದು
ಸೇವಿಸಿವನ ಜೀವ ೩೧

ಆದಿಕಾಲದಲ್ಲಿ ಆಲದೆಲೆಯ ಮೇಲೆ
ಶ್ರೀ ದೇವಿಯರೊಡನೆ ಮಲಗಿದ್ದಾಗ
ಆ ದೇವರೆಲ್ಲಿಹರೊ
ಮಾಧವ ನಗರಿಗೆ ಮೊದಲಾಪ ವಿಧಿ
ಪೋದಾಗ ಪೋದರೆಲ್ಲ
ಆಧಾರವಾದ ತತ್ವಂಗಳೆಲ್ಲವು
ಅಳಿದಾಗ ಅಳಿದರೆಲ್ಲ
ವೇದ ಏಕೋ ನಾರಾಯಣಾಸೀದೆಂದು ಪೇ
ಳಿದ ಕಾರಣ ಹಯವದನನೆ ಜಗದೊ
ಳಧಿಕ ದೈವವಾದ ೩೨

ಹೊಟ್ಟೆಯೆಂಬ ಪೊನ್ನ ತೊಟ್ಟಿಲೊಳಗಿಟ್ಟು
ಪಿತ್ಥಲ ಜೀವರ ನಿದ್ರೆಗೊಳಿಸುವನು
ಸೃಷ್ಟಿಕಾಲ ಬಂದಾಗ
ಹುಟ್ಟಿಸಿ ಬಹು ರೂಪದಾಟವನಾಡಿಸಿ
ಇಷ್ಟಂಗಳ ಕೊಡುವ
ದುಷ್ಟ ಮಕ್ಕಳ ಮಂಡೆ ಹೆಟ್ಟುವ ಕೆಲವರ
ಕಟ್ಟಲೆಯನು ಬಿಡಿಸ
ಶಿಷ್ಟರೆತ್ತಿಕೊಂಬ ಹಯವದನನ ಪಾದ
ಪಟ್ಟೆಯ ಕಾಂಬಂತೆ ಕಾಣದೆ ಮನ
ಮುಟ್ಟಿ ಭಜಿಸೊ ಜೀವ ೩೩

ಮಕ್ಕಳ ತಪ್ಪುಗಳ ಲೆಕ್ಕಿಸದೆ ತಾಯಿ
ಮಿಕ್ಕ ಖಳರ ತಪ್ಪು ಉಕ್ಕು ತಗ್ಗಿಸುವಳು
ಪಕ್ಕಿ ವಾಹನನೊಮ್ಮೊಮ್ಮೆ
ಸೊಕ್ಕಿ ನಡೆದರು ಭಕ್ಕುತರ ಕಾವ
ನಕ್ಕು ಕಾರುಣ್ಯದಲಿ
ಉಕ್ಕಿದ ರಕ್ಕಸರ ಶಿಕ್ಷಿಸದೆ ಬಿಡ
ಕ್ಷಿಪಾಮ್ಯಜಸ್ರಮೆಂಬ
ಆಕ್ಕೊಪದವ ಮತ್ಕರ್ಮ ಕೃನ್ಮತ್ಪರಮೆಂಬ
ಉಕ್ತಿಯನೇನೆಂಬೆ ಹಯವದನನ ಭಜಿಸಿ
ಮುಕ್ತಿ ಬೇಕೆಂಬುವರು ೩೪

ಎಂಭತ್ತು ನಾಲಕು ಲಕ್ಷ ಯೋನಿಗಳಲ್ಲಿ
ತುಂಬಿರ್ದ ಜೀವರಿಗೀ ರೂಪಂಗಳೆ
ಇಂಬಾದ ಬಹುರೂಪ
ಸಂಭ್ರಮದ ನಿಜರೂಪದಿಂದೆಸೆವ
ಕಂಬು ಚಕ್ರಾದಿಗಳ

ಎಂಬೊ ಮಾತಿಗೆ ಸಂದೇಹಸಲ್ಲ ವೇ
ಲುಂಬ ಸುಖವ ನೀವ
ಶಂಭು ಮುಖ್ಯ ಗುರುಗಳಿಂದ ಕೇಳಿರೊ ಸಾ
ನೆಂಬ ಹಂಕೃತಿಯಿಂದ ಹಯವದನನ ಪಾ
ದಾಂಬುಜ ಕಂತೇರುವ ॥೪॥

ಒಂದೆ ಅಂಬುಧಿ ಒಂದೆ ಕಡಗೋಲು ನೇಣೊಂದೆ
ಒಂದೆ ಸಾಧನ ಸರ್ವ ಸಾಧನಂಗಳು ಸರಿ
ಮುಂದೆ ಪರಿವ ದೈತ್ಯರ
ವೃಂದಕ್ಕೆ ಸುಧೆಯಿಲ್ಲ ವೃಂದಾರಕರಿಗುಂಟು
ಎಂದು ನಿರ್ಣೈಸಿ ತಾಗಿ
ಮುಂದಣ ಮುಕುತಿ ಯೋಗ್ಯರಿಗುಂಟು ಇತರರ
ಗೆಂದೆಂದಿಗಾಗದೈಯ
ತಂದೆ ಹಯವದನನೊಲ್ಲದ ವಾದಿಗೆ
ಸಂದೇಹಸಲ್ಲ ಬೂದಿಯ ಹೋಮದಂದದಿ
ಎಂದೆಂದಿಗಾಹುದೈಯ ॥೫॥

ಕಳ್ಳ ಭಕ್ತರಿಗೆ ಸಲ್ಲದು ಶುಭಫಲ
ಎಲ್ಲ ಬೀಜಕೆ ಸಲ್ಲದು ಸಲ್ಲಿಕೆ
ಎಲ್ಲಿ ಯೋಗ್ಯತೆಯುಂಟೊ
ಅಲ್ಲಿಯೆ ಫಲ ಅದಿಲ್ಲದವರಿಗಿಲ್ಲ
ಬಲ್ಲ ಬುಧರು ಕೇಳಿರೊ
ಎಲ್ಲ ಸಾಧನಗಳೊಲ್ಲದವಗೆ ಈ
ಫಲ್ಲ (ಫಲ) ದುರ್ಲಭಕಾಣಿರೊ
ಒಲ್ಲಿದ ಹಯವದನನೊಲ್ಲಿದಾಗಲಿ (ಒಲಿದಾಗಲಿ) ಈ
ಹಳ್ಳಿ ಬಿದ್ದ ಶಿಲೆ ಹೆಣ್ಣಾದವ್ರೋಲು ಅಂ
ತುಳಿದದ್ದು ಹೆಣ್ಣಾಯಿತೆ ॥೬॥

ಎನಗೆ ನಿನ್ನಲಿ ಭಕ್ತಿ ಇರಲಿ ಇಲ್ಲದಿರಲಿ
ಜನ ಹರಿಭಕ್ತನೆಂದೆನ್ನ ಕರೆಯಲಾಗಿ
ಮನ ಪಾಪಕೆರಗದಂತೆ
ಅನುದಿನ ನೀನೆನ್ನ ಕಾಯಬೇಕಾಯಿತು
ಅನಿಮಿತ್ತ ಸುಜನ ಬಂಧು
ಕನರಿಸಿ ಯಮಭಟರು ಮುಂದೆ ಕೊಂದರಾಗಿ
ಘನತೆಗೆ ಸಾಲದೈಯ
ತನ್ನವರ ಹಯವದನನ್ಯರಿಗೊಪ್ಪಿಸಿದ
ನೆನ್ನುವ ದುರ್ವಾರ್ತೆ ತಪ್ಪಿಸಿಕೋ ತಂದೆ
ಮುನ್ನಿಜನ (ಮುನಿಜನ) ವಂದ್ಯಪಾದ ೩೮

ನಿನ್ನನ್ನೆ ನೋಡುವ ನಿನ್ನನ್ನೆ ಪಾಡುವ
ನಿನ್ನನ್ನೆ ಬೇಡುವ ನಿನ್ನಕೊಂಡಾಡುವ
ಜನ್ನ (ಜನ) ರೊಳೆಂತಿಪ್ಪದೈ
ಕಣ್ಣು ಕುಕ್ಕಿ ಕಿವಿಯೊಳ್ ಸುಣ್ಣಹೊಯ್ದು ಶಿರ
ವನ್ನು ಕತ್ತರಿಸುವ
ಬನ್ನಬಡಿಸಿ ಗಿಲಿಕಿಯ ಮೆಟ್ಟಿಸುವ
ಘನ್ನ (ಘನ) ನರಕದ ಬಾಧೆ
ನಿನ್ನ ಮಹಿಮೆಗಿದು ಸಾಕೆ ದೇವರದೇವ
ಎನ್ನಾಳ್ದ ಹಯವದನ್ನ ವಿಚಾರಿಸೊ
ಅನ್ನಂತ ಗುಣಪೂರ್ಣ ೩೯

ನಾನಿನ್ನ ಮರೆತರೂ ನೀನೆನ್ನ ಮರೆತರೆ
ಹಾನಿ ನಿನಗೆ ನಿನ್ನ ಭಕ್ತವತ್ಸಲತೆಗೆ
ಹೀನತೆ ಬಂದಿತಾಗಿ

ತ ನಿರುತೇಶ್ವತ್ಪ್ರಯುತೇ ಕಿಂಚನಾರೇಯಿ.ಂಜ
ಮಾನ ಪನಂದಿತಾಗಿ
ನೀನುದಾಸೀನನಾಗೆ ಖಳರ ಸೇನೆ ಸ
ಜ್ಜನರ ಕೊಂದಿತಾಗಿ
ಶ್ರೀನಾಥ ಹಯವದನ ಶಿಶುಗಳ ತಪ್ಪನು
ಜನನಿ ಜರಿದರೆ ಜಗವೆಲ್ಲ ನಗುವರೊ
ಜಾಣರ ಜಾಣ ನೀನು ೬೨

೬೨ ರಾಗ ನಾಟಿ ಝಂಪೆತಾಳ

ಎಣೆಯಾರೊ ನಿನಗೆ ಹನುಮಂತರಾಯ ಪ

ಪ್ರಣತ ಜನಮಂದಾರ ಪವನ ಸುಕುಮಾರ ಅ

ಅಡಿಗಡಿಗೆ ರಾಮ ಪಾದಾಂಬುಜಕೆ ವಂದಿಸುತ
ನಡೆದೊಡನೆ ಮುದ್ರಿಕೆಯ ಪಡೆದು ಮುದದಿ
ದಡದಡನೆ ಅಂಬುಧಿಯ ದಾಟಿ ಸೀತೆಗೆ ಗುರುತ
ಕೊಡು ಕೊಡುತ ಕುಸ್ತರಿಸಿದಂಥ ಹನುಮಂತ ೧

ಗರಗರನೆ ಹಲ್ಗಡಿದು ಕಲುಷ ದೈತ್ಯರನೆಲ್ಲ
ಚರಚರನೆ ಸೀಳಿ ಸಂಭ್ರಮದಿಂದಲಿ
ಬಿರಬಿರನೆ ಕಣ್ಬಿಡುತ ಬಿಂಕದಲಿ ಲಂಕೆಯನು
ಸುರಸುರನೆ ಬಾಲದಲಿ ಸುಟ್ಟ ಬಲುಧಿಟ್ಟ ೨

ಫಳಫಳನೆ ಆರ್ಭಾಟದಿಂದಲಾ ರಾವಣನ
ನಳನಳನೆ ಬೆಳೆದ ನಂದನವಕಿತ್ತು
ಖೊಳಖೊಳನೆ ನಗುತ ದಶಕಂಧರನ ಗುದ್ದಿ ಬಂದೆ
ಭಳಿಭಳಿರೆ ಹಯವದನ ದಾಸ ನಿರ್ದೋಷ ೩

## ೬೩ ಉರುಟಾಣಿ ಹಾಡು

ರಾಗ ಶಂಕರಾಭರಣ ಆದಿತಾಳ

ಲಕ್ಷ್ಮಿ ರಮಣಗೆ ಮಾಡಿದಳು ಉರುಟಾಣಿ ಪ
ಇಳೆಯೊಳಗತಿಜಾಣೆ, ಸುಂದರ ಫಣಿವೇಣಿ ಅ

ಮತ್ಸ್ಯ ಕಚ್ಛಪ ಕಿರಸೆ ಕೇಸರಿಯಂದದ ಮುಖನೆ
ಸ್ವಚ್ಛಮುಖವ ತೋರ್ವೆ ಕುಂಕುಮ ಹಚ್ಚುವೆನು ೧

ಬಲಿಯ ದಾನವ ಬೇಡಿ ಇಳೆಯ ಈರಡಿ ಮಾಡಿ
ಅಳೆದಡಿಗಳ ತೋರ್ವೆ ಅರಿಶಿನ ಹಚ್ಚುವೆನು ೨

ದುರುಳ ಕ್ಷತ್ರಿಯರನ್ನು ಕೊರಳ ತರಿದ ಹರಿಯೆ
ಪರುಷದಿಂ ಕೊರಳ ತೋರ್ವೆ ಗಂಧವ ಹಚ್ಚುವೆನು ೩

ದಶರಥನಲಿ ಜನಿಸಿ ದಶಮುಖನ ಸಂಹರಿಸಿ
ಶಶಿಮುಖಿಯ ತಂದವನೆ ಕುಸುಮ ಮುಡಿಸುವೆನು ೪

ಹದಿನಾರು ಸಾಸಿರ ಸುದತಿಯರನಾಳಿದನೆ
ಪದುಮ ಕರವ ತೋರ್ವೆ ವೀಳ್ಯವ ಕೊಡುವೆನು ೫

ವಸನರಹಿತನಾಗಿ ವಸುಧೆಯ ತಿರುಗಿದೆ
ಬಿಸಜನಾಭನೆ ನಿನಗೆ ವಸ್ತ್ರವ ಹೊದ್ದಿಸುವೆನು ೬

ವರತುರಗವನೇರಿ ಕಲಿಯಸಂಹರಿಸುವ
ಸಿರಿಹಯವದನನೆ ಆರತಿಯೆತ್ತುವೆನು ೭

## ೬೪ ಬಾಗಿಲು ಕಟ್ಟುವ ಹಾಡು

ರಾಗ ಆನಂದಭೈರವಿ ಆದಿತಾಳ

ನೀರೊಳು ಮುಳುಗಿ ನಿಗಮ ಚೋರನ ಗೆದ್ದ
ನೀರಜಾಕ್ಷನೆ ಭಾಮೆ, ನಾ
ನೀರಜಾಕ್ಷನೆ ಭಾಮೆ

ಸಾರುವ ಮೈಯನು ಎನ್ನಲ್ಲಿ ತೋರದೆ
ಸಾರು ಸಾರು ನೀ ದೂರ ರಂಗ
ಸಾರು ಸಾರು ನೀ ದೂರ ೧

ಮಂದರ ಗಿರಿಯನು ಬೆನ್ನಲ್ಲಿ ಪೊತ್ತಂಥ
ಇಂದಿರೆಯರಸನೆ ಭಾಮೆ, ನಾ
ಇಂದಿರೆಯರಸನೆ ಭಾಮೆ
ಇಂದು ನಿನಗೆ ತಕ್ಕ ಭಾರಗಳಿಲ್ಲವೊ
ಸಿಂಧುವಿನೊಳಗೆ ನೀ ಪೋಗೈ ರಂಗ
ಸಿಂಧುವಿನೊಳಗೆ ನೀ ಪೋಗೈ ೨

ಧರಣಿಗೆ ಸುಖವನು ತೋರಿದ ಸೂಕರ
ಪರಮಪುರುಷನು ಭಾಮೆ, ನಾ
ಪರಮಪುರುಷನು ಭಾಮೆ
ವರಹ ರೂಪದ ನಿನ್ನ ಘುರುಘುರು ಶಬ್ದವ
ಅರಿವಳಲ್ಲವೊ ನೀ ಪೋಗೈ ರಂಗ
ಅರಿವಳಲ್ಲವೊ ನೀ ಪೋಗೈ ೩

ಬಾಲನ ತಾಪವ ಕೋಪದಿ ತರಿದಾ
ನಾರಸಿಂಹನು ನೋಡೆ ಭಾಮೆ, ನಾ
ನಾರಸಿಂಹನು ನೋಡೆ ಭಾಮೆ
ಮೇಲಿನ ವದನವ ಕ್ರೂರಕಾರ್ಯಂಗಳ
ಕೇಳಿ ಅಂಜುವಳಲ್ಲ ಪೋಗೈ ರಂಗ
ಕೇಳಿ ಅಂಜುವಳಲ್ಲ ಪೋಗೈ ೪

ವಾಸವನನುಜನೆ ವಾಮನ ರೂಪನೆ
ನಾಶರಹಿತನೆ ಭಾಮೆ, ನಾ
ನಾಶರಹಿತನೆ ಭಾಮೆ

ಕೂಸಿನ ರೂಪದಿ ಮೋಸ ಮಾಡಿದವಗೆ
ದಾಸಿಯೊಬ್ಬಳು ಬೇಕೆ ಪೋಗೈ ರಂಗ
ದಾಸಿಯೊಬ್ಬಳು ಬೇಕೆ ಪೋಗೈ ೨

ತಾತನ ಮಾತಿಗೆ ಮಾತೆಯನಳಿದ
ಖ್ಯಾತ ಭಾರ್ಗವನೆ ಭಾಮೆ, ನಾ
ಖ್ಯಾತ ಭಾರ್ಗವನೆ ಭಾಮೆ
ಮಾತೆಯ ನಳಿದ ಘಾತುಕ ನಿನಗೆ
ದೂತಿಯೊಬ್ಬಳು ಬೇಕೆ ಪೋಗೈ ರಂಗ
ದೂತಿಯೊಬ್ಬಳು ಬೇಕೆ ಪೋಗೈ ೬

ದಶರಥ ನಂದನ ದಶಮುಖ ಬಂಜನ
ಪಶುಪತಿ ವಂದ್ಯನೆ ಭಾಮೆ, ನಾ
ಪಶುಪತಿ ವಂದ್ಯನೆ ಭಾಮೆ
ವಸನಾದ ಏಕಪತ್ನೀ ವ್ರತನಿಗೆ ಪರ
ಪತಿಯೊಬ್ಬಳು ಬೇಕೆ ಪೋಗೈ ರಂಗ
ಪತಿಯೊಬ್ಬಳು ಬೇಕೆ ಪೋಗೈ ೭

ಹದಿನಾರು ಸಾಸಿರ ನೂರೆಂಟು ಸುದತೇರ
ಬದಿಯಲ್ಲಿಟ್ಟವನೆ ಭಾಮೆ, ನಾ
ಬದಿಯಲ್ಲಿಟ್ಟವನೆ ಭಾಮೆ
ಹದನಕ್ಕೆ ಬಾರದ ಮಾರ್ಗಂಗಳ್ಯಾತಕ್ಕೆ
ವದನ ಮುಚ್ಚಿಕೊಂಡು ಪೋಗೈ ರಂಗ
ವದನ ಮುಚ್ಚಿಕೊಂಡು ಪೋಗೈ ೮

ಬೌದ್ಧರ ಕುಲದಲ್ಲಿ ಪುಟ್ಟಿ ಅವರಂತೆ
ಮುಗ್ಧರ ಮಾಡಿದೆ ಭಾಮೆ, ನಾ
ಮುಗ್ಧರ ಮಾಡಿದೆ ಭಾಮೆ

ಶುದ್ಧ ಗುಣಗಳೆಲ್ಲ ಇದ್ದಲ್ಲಿಗೆ ಪೇಳೆ
ವೃದ್ಧಳು ಸಾಸಲ್ಲ ಪೋಗೈ ರಂಗ
ವೃದ್ಧಳು ಸಾನಲ್ಲ ಪೋಗೈ ೯

ವರ ತುರಗವನೇರಿ ಧರೆಯೆಲ್ಲ ಚರಿಸಿದ
ಧೊರೆ ವೀರ ನೋಡೆ ಭಾಮೆ, ನಾ
ಧೊರೆ ವೀರ ನೋಡೆ ಭಾಮೆ
ತುರಗದ ಚಾಕರಿಯೊಳಗಿರುವಗೆ ಒಬ್ಬ
ತರುಣಿಯು ಭೋಗವು ಬೇಕೆ ರಂಗ
ತರುಣಿಯು ಭೋಗವು ಬೇಕೆ ೧೦

ಸರುವ ಪ್ರಾಣಿಗಳ ಉದರದೊಳಿಂಬಿಟ್ಟು
ಶರಧಿಯೊಳ್ ಮಲಗಿದೆ ಭಾಮೆ, ನಾ
ಶರಧಿಯೊಳ್ ಮಲಗಿದೆ ಭಾಮೆ
ಧೊರೆ ಹಯವದನನ ಚರಣಕ್ಕೆರಗುತ
ತೆರೆದಳು ಬಾಗಿಲು ಭಾಮೆ, ಆಗ
ತೆರೆದಳು ಬಾಗಿಲು ಭಾಮೆ ೧೧

೭೫ ರಾಗ ನವರೋಜು ಛಾಪುತಾಳ

ಜೋ ಜೋ ಕಂದರ್ಪಕೋಟಿ ಲಾವಣ್ಯ
ಜೋ ಜೋ ವೃಂದಾರಕ ಶಿರೋರನ್ನ ಪ

ಜೋ ಜೋ ನಂದನ ಸುಕೃತದ ಫಲವೆ
ಜೋ ಜೋ ಮುನಿಮನ ಮಧುಪಕಮಲವೆ ಜೋ ಜೋ ಅ

ಪ್ರಳಯ ಜಲದಿ ಸೀ ನಾಲದೆಲೆಯ ಮೇಲೆ
ಹಲವು ಜೀವರು ನಿನ್ನ ಉದರದೊಳಿರಲು
ಕೆಲವು ದಿನದಿ ಯೋಗ ನಿದ್ರೆಯೊಳಿದ್ದು
ಬಲದಿಂದ ಸೃಜಿಸುವೆನೆಂದು ನೀ ಮಿಗಿದೆ ಜೋ ಜೋ ೧

ಪ್ರಕೃತಿಯ ಮೂಲ ಕಾರಣವನು ಮಾಡಿ
ಸಕಲ ತತ್ವಗಳ ಸಮೂಹದಿ ಕೂಡಿ
ವಿಕಳಿಸದಂತೆ ತನ್ಮಾತ್ರೆಯ ಹೂಡಿ
ಅಖಿಳೇಶ ಮಹ ತತ್ವಗಳ ನಿರ್ಮಿಸಿದೆ ಜೋ ಜೋ ೨

ಮಹತತ್ವದಿಂದಹಂಕಾರವು ಪುಟ್ಟೆ
ಅಹಂಕಾರದಿಂದ ವೈಕಾರಿಕೆ ಮೊದಲಾದ
ತ್ರಿವಿಧ ತತ್ವಗಳ ನಿರ್ಮಾಣವ ಮಾಡಿ
ಮಹ ಮಹಿಮೆಯ ಮೆರೆದೆ ಜಗವರಿಯೆ ಜೋ ಜೋ ೩

ಇಪ್ಪತ್ತು ನಾಲ್ಕೈದಾರು ತತ್ವಗಳಿಂದ
ತಪ್ಪದೆ ಬೊಮ್ಮಾಂಡವ ನಿರ್ಮಿಸಿದೆ
ಸರ್ಪಶಯನನಾಗಿ ನಾಭಿ ಕಮಲದಿಂದ
ಅಪ್ಪ ಬೊಮ್ಮನ ಪ್ರಸವಿಸಿದೆ ನೀನಂದು ಜೋ ಜೋ ೪

ಒಂದು ಮೂರುತಿಯಿಂದ ಸೃಷ್ಟಿಯ ಮಾಡಿ ಮ
ತ್ತೊಂದು ಮೂರುತಿಯಿಂದ ಪಾಲನೆ ಮಾಡಿ
ಒಂದು ಮೂರುತಿಯಿಂದ ಸಂಹಾರ ಮಾಡುವೆ
ಒಂದೊಂದು ಮಹಿಮೆಯನಂತಾದ್ಭುತವೊ ಜೋ ಜೋ ೫

ಒಂದೊಂದು ರೋಮ ಕೂಪದೊಳು ಬ್ರಹ್ಮಾಂಡವು
ನಿಂದಿರೆ ಅನಂತಾನಂತ ಕೋಟಿಗಳು
ಒಂದು ಗೋಕುಲದಲ್ಲಿ ಶಿಶುವಾಗಿ ತೋರಿದೆ
ನಂದದಿಂದಲಿ ಶರಣೆಂದರು ಸುರರು ಜೋ ಜೋ ೬

ಜನನ ಮರಣ ಭಯದಿಂದ ದೇವತೆಗಳು
ಅನುದಿನ ನಿನ್ನ ಪೂಜೆಯ ಮಾಡುತಿರಲು
ಪುನರಾವೃತ್ತಿ ರಹಿತವಾದ ಫಲವಿತ್ತೆ
ಮನುಜನಂತೆ ತೋರುವುದೇನುಚಿತವೊ ಜೋ ಜೋ ೭

ಬೊಮ್ಮ ರುದ್ರಾದಿ ದೇವತೆಗಳಿಗವಸರ
ಒಮ್ಮೆ ಕಾಣರು ಸಿರಿ ರಮ್ಮೆ ಚೆಲುವನ
ಒಮ್ಮನದಿಂದ ನೋಡುವೆನೆಂಬ ಭರದಿಂದ
ರಮ್ಮೆ ಮುಖವ ತಗ್ಗಿಸಿ ನಾಚಿದಳು ಜೋ ಜೋ ೮

ದಶದಿಕ್ಕು ನೋಡುತ್ತ ಭಯದಿಂದ ಕಮಲಜ
ಬಿಸನಾಳದೊಳಗಿದ್ದ ದಾರಿಯ ಕಾಣದೆ
ದಶ ಶತವರುಷ ನಿಮ್ಮನು ಧ್ಯಾನಿಸುತಿರೆ
ವಸುಧೀಶ ನಿಮ್ಮ ನಿಜವ ತೋರಿದಿರಿ ಜೋ ಜೋ ೯

ಆಲೋಚನೆಯಿಂದ ಸರ್ವ ವಿಷಯಗಳ
ಲೀಲೆಯಿಂದಲಿ ಮಾಡೆ ಕಮಲ ಸಂಭವನ
ಪೋಲು ಮಾಡದಂತೆ ವಳಿತಾಗಿ ತಲೆ ಬಾಗೆ
ಮೂಲೋಕವ ಕೃಪೆಯಿಂದ ಪಾಲಿಸಿದೆ ಜೋ ಜೋ ೧೦

ನಂದ ಯಶೋದೆ ವಸುದೇವ ದೇವಕಿಯರು
ಹಿಂದೆ ಮಾಡಿದ ಸುಕೃತ ಫಲವಾಯಿತೆಂದು
ಇಂದಿರಾಪತಿ ಜನಿಸಿದನೆಂಬ ಹರುಷದಿ
ಬಂದ ಬ್ರಾಹ್ಮಣರ ದ್ರವ್ಯದಿ ದಣಿಸಿದರು ಜೋ ಜೋ ೧೧

ಜಾತ ಕರ್ಮವಮಾಡಿ ಮಧುವ ಬಾಯೊಳಗಿಟ್ಟು
ಪೊತ್ತು ಮೊರದ ಗೊಟ್ಟಿನಲಿ ಮಲಗಿಟ್ಟು
ನಾಥ ನಾರಾಯಣನವತಾರವೆನಲು
ಮಾತೆಯು ಮೊಲೆಪಾಲ ನುಂಡೆ ಬೇಗದಲಿ ಜೋ ಜೋ ೧೨

ಈರಾರು ದಿನದಲ್ಲಿ ಭಾರತಿ ಪಾರ್ವತಿ
ಓರಂತೆ ಶಚಿರತಿ ಮೊದಲಾದ ಸತಿಯರು
ನಾರಾಯಣ ಪರದೇವತೆಯೆಂದು
ನಾರಿಯರೆಲ್ಲ ಪಾಡಿದರ್ಹರುಷದಲಿ ಜೋ ಜೋ ೧೩

ನಾಮಕರಣ ದಿನ ಬ್ರಹ್ಮಾದಿ ಸುರರು
ಈ ಮಹೋತ್ಸವವ ನೋಡೇವೆಂಬ ಭರದಿಂದ
ಆ ಮಹಾ ಸ್ತೋಮವೆಲ್ಲ ಕೂಡಿ ಬಂದು
ಈ ಮಹಾ ಶಿಶುವ ನೋಡಿದರು ಆರ್ಥಿಯಲಿ ಜೋ ಜೋ ೧೪

ವ್ಯಾಸ ಧೌಮ್ಯಾಚಾರ್ಯರೊಲಿದು ಮಂತ್ರಗಳಿಂದ
ಸಾಸಿರ ಕೋಟ್ಯಾನಂತ ನಾಮಗಳುಳ್ಳ
ವಾಸುದೇವ ಕೃಷ್ಣನೆಂಬ ನಾಮವನಿಟ್ಟು
ಸೂಸಿದರಕ್ಷತೆ ಸುಮುಹೂರ್ತದಲಿ ಜೋ ಜೋ ೧೫

ಕ್ಷೀರಾಂಬುಧಿಯನ್ನು ತೊಟ್ಟಿಲು ಮಾಡಿ
ಓರಂತೆ ನಾಲ್ಕು ವೇದಗಳ ನೇಣಸಮಾಡಿ
ವಾರುಣಿ ಪತಿಯನು ಹಾಸಿಗೆ ಮಾಡಿ
ನಾರಿಯೊಡನೆ ಮಲಗಿದ ಹಯವದನ ಜೋ ಜೋ ೧೬

೭೭ ರಾಗ ಜಂಜೂಟಿ ಅಟತಾಳ

ಹೇಗೆ ಮೆಚ್ಚಿದೆ ಹೆಂಗಳ ರನ್ನೆ
ಹಲವು ರೂಪ ತಾಳಿದವನ ಪ.

ರಾಗ ಮಿಗಿಲು ಲಕುಮಿರಮಣಾ
ಭೋಗಿರಾಜ ಶಯನನ ಅ.

ಜಲದಿ ಚರಿಸುತಿಹನು ಸಂತತ
ಒಲಿದು ಶಿರವ ನೆಗಹಿನೋಡ
ಸಲೆ ವಿಕಾರ ಕೋರೆ ಹಲ್ಲ
ಛಲಮಹೋಗ್ರ ರೂಪನೆ

ನೆಲವ ನಳೆದು ಕುಬ್ಜ ಕಾಯ
ತಲೆಯ ತರಿದು ಕಪಿಯೊಳಾಡಿ
ಒಲಿದು ಗೋವ ಕಾಯ್ದು ಬತ್ತಲೆ
ನಲಿದು ತುರಗವೇರಿದವನ ೧

* ನಾರಿ ಲಕ್ಷ್ಮೀ ಸಹ (ಪಾ.)

ಸೊಗಡು ಗಂಧವೆಸೆವ ತನುವು
ತೆಗಡಬಾಯಿ ಕುಗ್ಗಿನ ಬೆನ್ನು
ಅಗಿಯುತಿಪ್ಪ ಮುಸುಡು ರೌದ್ರ
ಹೊಗರುತಿಪ್ಪ ವದನನ

ವಿಗಡ ವಿಪ್ರರಾಜ ವೈರಿ
ಬಗೆಯ ಬಡದಾರಣ್ಯ ವಾಸಿ
ನಗವ ಕೊನೆಯ ಬೆರಳಲೆತ್ತಿದ
ಜಗದಲಜ್ಜೆಯ ತೊರೆದ ಕಲ್ಕಿಯ ೨

ಮಿಡಿದು ಹೊಳೆವ ಚಂಚಲಚಿತ್ತ
ಕಡು ಕಠಿಣ ದೇಹದವನ
ಹಿಡಿದ ರೋಮಮಯ ಶರೀರ
ಕಿಡಿಯನುಗುಳುವ ನಯನನ

ಬಿಡದೆ ದಾನಬೇಡಿ ಕೊಡಲಿ
ಪಿಡಿದು ಮೃಡನ ಧನುವ ಮುರಿದು
ಜಡಿದು ಅಗ್ರಪೂಜೆಗೊಂಡ
ಕಡು ನಿರ್ವಾಣ ಹಯವದನನ ೩

೬೨ ರಾಗ ಭೈರವಿ ಛಾಪುತಾಳ

ಹೋಗುತಿದೆ ಹೊತ್ತು ಕಳೆದೆ ವ್ಯರ್ಥವಾಗಿ
ಹರಿಗುರುಗಳ ನೆನೆಯದೆ ಪ.

ನರನ ನೂರಮೂವತ್ತೆರಡು ಕೋಟಿ
ವರುಷ ದಿವಸವೊಂದೆ ಬೊಮ್ಮಗೆ
ಪರಿಕಿಸಲೀ ಬ್ರಹ್ಮಕಲ್ಪ ಸಾಸಿರಕೋಟಿ
ನರಕದೊಳಗೆ ಬಿದ್ದು ಮರಳಿ ಭವದಿಬಂದು ೧

ಒಂದೊಂದಕೆ ಇಪ್ಪತ್ತೊಂದುಲಕ್ಷ ಯೋನಿ
ಎಂದೆನಿಸುವ ಸ್ವೇದಜ ಉದ್ಭಿಜ
ಬಂದು ಜರಾಯುಜಾಂಡಜ ಕುಲದಲಿ ಪುಟ್ಟಿ
ನೊಂದೆ ಎಂಭತ್ತಾನಾಲ್ಕು ಲಕ್ಷ ಯೋನಿಯಲಿ ೨

ಮಾಸ ಒಂಬತ್ತು ಮತಿಗೆಟ್ಟು ಗರ್ಭದಿ
ಹೇಸದೆ ಬಂದು ಜೀವಿಸಿ ಬಳಲಿ
ಮೋಸವ ನರಿಯದೆ ಮುನ್ನಿನ ಕರ್ಮದಿ
ಘಾಸಿಯಾದೆನೊ ಯೌವನ ಮದದಿ ಸೊಕ್ಕಿ ೩

ಕೆಲಹೊತ್ತು ಚದರಂಗ ಪಗಡೆ ಆಟಗಳಿಂದ
ಕೆಲಹೊತ್ತು ಹಸಿವೆ ನಿದ್ರೆಗಳಿಂದಲಿ
ಕೆಲಹೊತ್ತು ಕಾಕ ಪೋಕರ ಕಥೆಗಳಿಂದ
ಕೆಲಹೊತ್ತು ಪರವಾರ್ತೆ ಪರನಿಂದೆಗಳಿಂದ ೪

ಕಾಲವು ಕಡೆಯಾಗೆ ಹರಿ ನಿಮ್ಮನರ್ಚಿಸೆ
ವೇಳೆಯಿಲ್ಲದೆ ಹೋಯ್ತು ಬಂಜೆಯಾಗಿ
ಜಾಲಿಸಿ ಹೋಯಿತು ಈ ವಿಧದಿ ಹೊತ್ತು
ಪಾಲಿಸೊ ದಯಮಾಡಿ ಸಿರಿ ಹಯವದನ

೬೮ ರಾಗ ದೇಶಿ ಝಂಪುತಾಳ

ಬಿಟ್ಟು ಬನ್ನಿರೋ ಸಂಸಾರದ್ಹಂಬಲ ಪ.

ಸೃಷ್ಟಿಗೊಡೆಯನ್ನ ಸೇರಿ ಸುಖಿಸ ಬನ್ನಿರೊ ಅ.

ಹೆಂಡಿರು ಮಕ್ಕಳು ಎಂಬ ಹಂಬಲು ಬೇಡಿರೊ
ಕೊಂಡವರಲ್ಲ ಕೊಡುವರಲ್ಲ ಮುಂದಣ ಗತಿಯನು ೧

ಎಷ್ಟುಮಾಡಿ ಗಳಿಸಿ ತಂದರು ಸಾಲದೆಂಬರು
ನಷ್ಟಮಾಡಿ ನಿಮ್ಮ ಬದುಕು ಎಲ್ಲತಿಂಬರು ೨

ನಡು ಬೀದಿಯಲ್ಲಿ ನಿಲಿಸಿ ಸೆಳೆದು ಸುಲಿವರೊ
ಕುಡಿ ಹುಬ್ಬು ಕಡೆಗಣ್ಣು ನೋಟದಿಂದಲಿ ೩

ಉಂಡು ಉಟ್ಟು ಗುಂಡಿನಂತೆ ಮನೆಯಲಿಹರೊ
ಚಂಡ ಯಮನ ದೂತರು ಬಂದು ಎಳೆದು ಒಯ್ವರೊ ೪

ಮುಟ್ಟಿ ಭಜಿಸಿರೋ ಹಯವದನನಂಘ್ರಿಯ
ನೆಟ್ಟನೆ ಮುಕ್ತಿ ಮಾರ್ಗ ತೋರಿಕೊಡುವನೊ ೫

೭೯ ರಾಗ ನೀಲಾಂಬರಿ ಅಟತಾಳ

ದಾರಿಯ ತೋರೋ ಗೋಪಾಲ ಪ.

ವಾರಿಜನಾಭ ವೈಕುಂಠಲೋಲ ಅ.

ಸಿಕ್ಕಿದೆ ಭವ ಪಾಶದೊಳಗೆ
ಲೆಕ್ಕವಿಲ್ಲದ ಜಂತುಗಳಿಗೆ
ದಿಕ್ಕೊಬ್ಬರಿಲ್ಲವೊ ಎನಗೆ
ಕಕ್ಕಸ ಕಳೆದು ನಿನ್ನಯ ಪಾದಗಳಿಗೆ ೧

ಗಜ ರಕ್ಷಕನು ನೀನೆಂದು
ಅಜ ರುದ್ರಾದಿಗಳಂದು
ನಿಜವಾಗಿ ಪೇಳಿದರೆಂದು
ಸುಜನರೊಡೆಯನೆ ಕೇಳಿದೆ ನಾನಿಂದು ೨

ಸಿರಿ ಹಯವದನನೆ ಬಾರೈ
ಕರೆದೆನ್ನ ದಾರಿಯ ತೋರೈ
ಪರಮ ಭಕ್ತರಿಗೆ ಇನ್ನಾರೈ
ಪರಮ ಪುರುಷ ನೀನಲ್ಲದೆ ಗತಿಯಾರೈ ೩

೭೧ ರಾಗ ಮಧ್ಯಮಾವತಿ ತ್ರಿಪುಟತಾಳ

ಸೇವಕನೆಲೊ ನಾನು ನಿನ್ನಯ ಪಾದ
ಸೇವೆ ನೀಡೆಲೊ ನೀನು                                        ಪ.

ಸೇವಕನೆಲೊ ನಾನು ಸೇವೆ ನೀಡೆಲೊ ನೀನು
ಕಾವುದೆನ್ನೆಲೊ ಶ್ರೀ ಮಧೂವರ
ರಾವಣಾಂತಕ ರಕ್ಷಿಸೆನ್ನನು

ಗೋವರ್ಧನ ಗಿರಿಧರದೇವ
ಗೋವ್ರಗಳ ಕಾವ
ಶ್ರೀ ಮಹಾನುಭಾವ

ಶ್ರೀ ವಲ್ಲಭ ದಯಮಾಡೆನ್ನನು
ಈ ವೇಳೆಗೆ ಇಂದಿರೆರಮಣ                                        ಅ.

ರಾಮ ದಶರಥ ನಂದನ - ರಘುಕುಲಾಬ್ಧಿ
ಸೋಮ ಸುಂದರ ವದನ

ಕಾಮನ ಪರಿಪೂರ್ಣಕಾಮ ಕೌಸಲ್ಯರಾಮ
ಸ್ವಾಮಿ ಶ್ರೀರಂಗಧಾಮ ದೈತ್ಯವಿ
ರಾಮ ಶ್ರೀಮದನಂತ ನಾಮ

ಧೀಮ (ಭೀಮ ಪಾ.) ಮುನಿಜನಸ್ತೋಮ
ರಮ್ಯ ಗುಣಧಾಮ
ರಣರಂಗ ಭೀಮ
ಕೋಮಲ ಶ್ಯಾಮ

ಸಾಮಜವರದಾ ನೀನನುದಿನ
ಕಾಮಿತ ಫಲ ಕರುಣಿಸಿ ಕಾಯೊ                                        ೧

ಶಂಕರ ಸುರಸೇವಿತ ಶೇಷ ಗರುಡಾ
ಲಂಕಾರ ಮಣಿ ಶೋಭಿತ

*ಪಂಕಜನಯನ ವಿಾಸಾಂಕಜನಿತ ಪಾದ
ಪಂಕಜಾಸನ ವಿನುತ ತಿರುಪತಿ
ವೆಂಕಟ ಬಿರುದಾಂಕ ಜಯಜಯ

ಶಂಖ ಚಕ್ರಗದೆ ಪಂಕ
ಜ ಪಿಡಿದಕಳಂಕ
ಚರಿತ ತಾಟಂಕಗೊಲಿದ ನಿಶ್ಶಂಕ

ಲಂಕಾಧಿಪ ಲಾಲಿತ ರಘುಪತಿ
ಕಿಂಕರರಿಗೆ ಕಿಂಕರನಾಸೆಲೊ ೨

ಮಂದರೋದ್ಧರ ಮಾಧವ - ಮಧುಸೂದನ
ನಂದ ಮಂಗಳ ವಿಗ್ರಹ

ಬಿಂದು ಮಾಧವ ಶ್ರೀ ಗೋವಿಂದ ಗೋಕುಲಾನಂದ
ವಂದಿತಾಮರ ವೃಂದ ಶ್ರುತಿಗಳ
ತಂದ ತುರಗವನೇರಿ ಬಂದ

ವೃಂದಾವನದೊಳಗಿಂದ
ಯಶೋದೆಯ ಕಂದ
ಹರಿಗೋವಿಂದ
ಶೇಷಗಿರಿಯಲ್ಲಿ ನಿಂದ

ಮಂದಾಕಿನಿ ಪಡೆದನೆ ಧ್ರುವಗೊಲಿ
ದಂದದಿ ಎನಗೊಲಿ ಹಯವದನ ೩

---

*ಪಂಕಜನಯನ ವಿಾಸಾಂಕಜನಕ ಪಾದ (ಪಾ.)

೭೧ ರಾಗ ಸೌರಾಷ್ಟ್ರ ಅಟತಾಳ

ಅಜನು ತೊಳೆದು ಅರ್ಚಿಸುವ ಶ್ರೀಪಾದಕ್ಕೆ ಎಚ್ಚರಿಕೆಚ್ಚರಿಕೆ ಪ.
ಧ್ವಜ ವಜ್ರ ರೇಖೆಯಿಂದೊಪ್ಪುವ ಪಾದಕ್ಕೆ ಎಚ್ಚರಿಕೆಚ್ಚರಿಕೆ ಅ.

ಸರಸಿಜಾಕ್ಷಿ ರಮೆಯೊತ್ತುವ ಪಾದಕ್ಕೆ ಎಚ್ಚರಿಕೆಚ್ಚರಿಕೆ
ಸುರರೆಲ್ಲರು ಬಂದೆರಗುವ ಪಾದಕ್ಕೆ ಎಚ್ಚರಿಕೆಚ್ಚರಿಕೆ ೧

ವ್ರಜದ ಗೋಪಿಯರು ಭಜಿಸುವ ಪಾದಕ್ಕೆ ಎಚ್ಚರಿಕೆಚ್ಚರಿಕೆ
ಸುಜನರೆಲ್ಲರು ಬಂದು ಸ್ತುತಿಸುವ ಪಾದಕ್ಕೆ ಎಚ್ಚರಿಕೆಚ್ಚರಿಕೆ ೨

ಗರುಡನೇರಿ ಮೆರೆದ ಗಾಂಭೀರ್ಯ ಪಾದಕ್ಕೆ ಎಚ್ಚರಿಕೆಚ್ಚರಿಕೆ
ಉರಗನ ಹೆಡೆಮೇಲೆ ಹಾರಿದ ಪಾದಕ್ಕೆ ಎಚ್ಚರಿಕೆಚ್ಚರಿಕೆ ೩

ಗೋಪೇರ ಸ್ತನದಲಿ ಕುಣಿದಂಥ ಪಾದಕ್ಕೆ ಎಚ್ಚರಿಕೆಚ್ಚರಿಕೆ
ಆಪಯೋಜಾಸನ ವಂದಿತ ಪಾದಕ್ಕೆ ಎಚ್ಚರಿಕೆಚ್ಚರಿಕೆ ೪

ತಿಲೆಯು ಸ್ತ್ರೀ ಮಾಡಿದ ಶೃಂಗಾರ ಪಾದಕ್ಕೆ ಎಚ್ಚರಿಕೆಚ್ಚರಿಕೆ
ಚೆಲುವ ಹಯವದನನ ಚರಣಾರವಿಂದಕ್ಕೆ ಎಚ್ಚರಿಕೆಚ್ಚರಿಕೆ ೫

೭೨ ರಾಗ ಕಲ್ಯಾಣಿ ಅಟತಾಳ

ಪಾಥೇಯುವ ಕಟ್ಟಿರೋ ವೈಕುಂಠಕ್ಕೆ
ಪಯಣ ಸಮ್ಮತವಾದರೆ ಪ.

ಮಾತಾಪಿತರ ಭಕ್ತಿ ಎಂಬ ಚಿತ್ರಾನ್ನವ
ಪಾರ್ಥಸಾರಥಿ ಪಾದಪದ್ಮ ಪತ್ರವ ಹಾಸಿ ಅ.

ಹರಿಭಕ್ತಿ ಹರಿಗೋಲಿಂದ ಮೆಲ್ಲ ಮೆಲ್ಲನೆ
ವಿರಜಾ ನದಿಯು ದಾಟಿರೊ
ಕರಜಾಗ್ರಗಳಿಂದ ಹಿರಣ್ಯಕನನು ಸೀಳ್ದ
ಪರ ವಾಸುದೇವನ ದರುಶನವಾಗೊಂದು ೧

ಕೊಗಳತೆಗೆ ಕೊಂಚವೊ ಶ್ರೀ ಹರಿಪುರ
ಕುಂಜರಪತಿ ಸಾಕ್ಷಿಗೊ
ನಾಗಶಯನ ಹರಿ ನಮ್ಮನು ಕಂಡರೆ
ಹೋಗಬೇಡೆಂದು ಹೋಗಗೊಡನಯ್ಯ ೨

ಮುಗ್ಧಗೆ ದುರ್ಲಭವೋ ಶ್ರೀಹರಿಪುರ
ಬದ್ಧನಿಗೆ ದೂರವೊ
'ತದ್ವಿಷ್ಣೋಃ ಪರಮಂ ಪದ' ವೆಂಬುವಂಥ
ವಿದ್ವಾಂಸರಿಪ್ಪಂಥ ವಿಖ್ಯಾತ ಪುರವಯ್ಯ ೩

ಪಾಪಿಷ್ಟಗತಿ ದೂರವೊ ಶ್ರೀಹರಿಪುರ
ಭಕ್ತರಿಗನುಕೂಲವೊ
ತಾಪತ್ರಯಗಳಿಲ್ಲ ಆ ಪಟ್ಟಣಸೇರೆ
ಆಪತ್ತಿಲ್ಲದ ಪರಮಾನಂದ ಪದವಿಯು ೪

ಪ್ರಳಯದೊಳಳಿವಿಲ್ಲವೊ ಶ್ರೀ ಹರಿಪುರ
ಛಳಿ ಮಳೆ ಬಿಸಿಲಿಲ್ಲವೊ
ಬೆಳೆ ಸುಬಿತ್ತಗಳಿಲ್ಲ ಬೇಕಾದ ಸಂಪತ್ತು
ನಳಿನನಾಭನ ಪುರದೊಳು ನೆಲೆಸಿಹುದಯ್ಯ ೫

ಶುದ್ಧ ಸಾತ್ವಿಕ ವೃತ್ತಿಯೋ ತಾಮಸರಿಗೆ
ಹೊದ್ದುವೊಡಳವಲ್ಲವೊ
ಅಧ್ಯಾತ್ಮನಿಬ್ಬರ ಅರ್ಜುನ ಕೇಳಲು
ತದ್ಧಾಮ ಪರಮಾನಂದ ಪದವಿಯು ೬

ಬರವೆಂಬ ಮಾತಿಲ್ಲವೊ ಒಂದು ಕಾಸು
ತೆರವ ಕೊಡಲಿಬೇಡವೊ
ಪರಮಪುರುಷ ಹಯವದನ ರಾಯನಲ್ಲಿ
ಸರುವಮಾನ್ಯವನಿತ್ತು ಜನರ ರಕ್ಷಿಪನಯ್ಯ ೭

೭೩ ರಾಗ ಪೂರ್ವಿ ಅಟತಾಳ

ಚರಣ ಕಮಲವನ್ನು ನೆನೆವೆ ನಾದಿವ್ಯ
ಚರಣ ಕಮಲವನ್ನು ನೆನೆವೆ ನಾ ಪ.
ಚರಣ ಕಮಲವನ್ನು ನೆನೆದು ನೆನೆದು ನಾನು
ದುರಿತದ ರಾಸಿಯು ಸಂಹರಿಸುವೆನು ಅ.

ಶ್ರುತಿಯು ನುದ್ಧರಿಸಿದುದಾರನ ಸಿಂಧು
ಮಥನಕ್ಕೊದಗಿದ ಗಂಭೀರನ
ಕ್ಷಿತಿಯು ನೆತ್ತಿದ ಬಲುಧೀರನ ಶಿಶು
ಸ್ತುತಿಸೆ ಕಂಭದಿ ಒಂದ ವೀರನ ೧

ಇಂದ್ರನ ಪದವಿ ನಿಲಿಸಿದನ್ನ ತನ್ನ
ತಂದೆಯು ಮಾತು ಸಲಿಸಿದನ್ನ
ಕಂಧರ ದಶನ ಸೋಲಿಸಿದನ್ನ *ವ್ರಜ
ದಿಂದು ಮುಖಿಯುರ ಪಾಲಿಸಿದನ್ನ ೨

ವಧುಗಳ ವ್ರತವ ಖಂಡಿಸಿದನ ದುಷ್ಟ
ರುವಿಸಲು ತುದಿಯು ತುಂಡಿಸಿದನ
ಇದಿರಾದ ಖಳರ ಖಂಡಿಸಿದನ ಹಯ
ವದನ ಪೆಸರಕೊಂಡುದಿಸಿದನ ೩

೭೪ ರಾಗ ಪೂರ್ವಕಲ್ಯಾಣಿ ಛಾಪುತಾಳ

ಕುದುರೆ ಬಂದಿದೆ ಚೆಲ್ವ ಕುದುರೆಬಂದಿದೆ ಪ.
†ವಾದಿರಾಜಗೊಲಿದು ಬಂದು ಸ್ವಾದಿ ಪುರದಲ್ಲಿ ನಿಂದ ಅ.
ಮುಂಗಾಲು ಕೆದರಿ ಕುಣಿವ ಕುದುರೆ
ಹಿಂಗಾಲಿಲಸುರರ ಒದೆವ ಕುದುರೆ
ರಂಗನೆಂದರೆ ಸಲಹೊ ಕುದುರೆ
ತುಂಗ ಹಯವದನ್ನ ಕುದುರೆ ೧

---

*ಪಾಂಡವ. ೦೦ದುಮುಖಿಯು ಪಾಲಿಸಿದವ್ನ (ಪಾ.)

ಹಲ್ಲಣದೊಳಗೆ ನಿಲ್ಲದು ಕುದುರೆ
ಬೆಲ್ಲ ಕಡಲೆ ಮೆಲ್ವ ಕುದುರೆ
ಫುಲ್ಲಭವನಿಗೊರೆದ ಕುದುರೆ
ಜೆಲ್ವ ಹಯವದನ್ನ ಕುದುರೆ ೨

ಸುತ್ತ ಮುತ್ತಲಾಡುವ ಕುದುರೆ
ಮತ್ತ ವಾದಿಯಗೆಲ್ವ ಕುದುರೆ
ಶತ್ರುಗಳೆಲ್ಲರ ಬಡಿವ ಕುದುರೆ
ತತ್ವ ಹಯವದನ್ನ ಕುದುರೆ ೩

## ೭೫ ಶ್ರೀ ವೆಂಕಟೇಶ ದರ್ಶನ ಸುಳಾದಿ

### ಧ್ರುವತಾಳ

ಅರಳಿದ ಕೆಂದಾವರೆಯ ಇರವ ಧಿಕ್ಕರಿಸುವ
ಗಿರಿಯ ತಿಮ್ಮರಾಯನ ಚರಣಗಳ ಕಂಡೆ ನಾ
ಅರುಣ ತಳದಲ್ಲಿಪ್ಪ ಅಂಕುಶ ಧ್ವಜ ವಜ್ರಾದಿ
ಸುರಚಿರ ರೇಖೆಗಳ ಸೊಬಗನು ಕಂಡೆ ನಾ
ಬೆರಳ ಪಾಲ್ಗಳಮೇಲೆ ಬೇರೆಬೇರೆ ತೋರ್ಪ ಭಾ
ಸುರ ನಖ ಮಣಿ ಕಿರಣಗಳ ಕಂಡೆ ನಾ
ಕಿರುಗೆಜ್ಜೆ ಕಡಗ ಪೆಂಡೆಯದ ಪ್ರಭೆಯನು ಕಂಡೆ
ಕರಿದಂತ ಪೋಲ್ವ ಜಂಘೆಗಳ ಕಂಡೆ ನಾ
ಎರಡು ರನ್ನದ ಕನ್ನಡಿಯ ಕೆತ್ತಿಸಿದ ಪೋಲ್
ಮುರಹರನ ಮೋಹನದ ಜಾನುದ್ವಯವ ಕಂಡೆ ನಾ
ಉರುಟು ಕದಳಿಯ ಸ್ತಂಭದಂತೆ ವರ್ತುಳವಾದ
ಹರಿಯ ಪೀವರ ಕೊಡೆಗಳ ಕಂಡೆ ಕನಸಿನಲಿ
ವರಪೀತಾಂಬರ ಕಾಂಚಿ ಕಿಂಕಿಣಿ ಜಾಲಗಳಿಂದ

† ಕುದುರೆ ಬಂದಿದೆ ವಾದಿರಾಜಗೆ ಮುದದಿ ಜ್ಞಾನ ಭಕುತಿಕೊಡುವ

ಮೆರೆವ ವೆಂಕಟೇಶನ ಕಟಿಯನು ಕಂಡೆ ನಾ
ಕಿರುದೊಳ್ಳುದರದಲ್ಲಿ ನಾಭಿ ತ್ರಿವಳಿಯು ಇಂ
ತಿರ ತಪ್ಪಿಕೊಂಬ ಮಧ್ಯದ ಸೊಬಗ ಕಂಡೆ ನಾ
ಸಿರಿದೇವಿ ಶ್ರೀವತ್ಸ ಕೊರಳ ಕೌಸ್ತುಭ ರತ್ನ
ಸರದಿ ಮಿಂಚುವ ವಿಶಾಲುರ ಸ್ಥಳವ ಕಂಡೆ ನಾ
ಕರ ಚತುಷ್ಟಯದಿ ಶಂಖ ಚಕ್ರಗದೆ ಪದುಮ
ವರ ಭಯವ ಕಂಡೆ ಕರ್ಣಕುಂಡಲವ ಕಂಡೆ ನಾ
ತ್ರಿರೇಖೆಯಿಂದೊಪ್ಪುವ ಕಡೆದ ಶಂಖದಂದದಿ
ಕರುಣಿ ವೆಂಕಟೇಶನ ಕಂಧರವ ಕಂಡೆ ನಾ
ಕುರುಳು ಗೂದಲ ವಾಲ ತಿಂಗಾಡಿಯಂತಿರ್ಪ ಪುಬ್ಬ
ಕೂರುವದಂದದಿ ಗಲ್ಲ ಚುಬುಕಾಗ್ರದಿಂ
ಸರಸ ಬಿಂಬಾಧರ ಸುಸ್ಮಿತನಾಸಾಪುಟ ಕ
ಸ್ತೂರಿ ನಾಮ ಸರಸಿಜನಯನಗಳಿಂದೆಸೆವ
ಸಿರಿಮೊಗವ ಕಂಡೆ ನಾ ಹಯವದನ ಶ್ರೇಷ
ಗಿರಿಯ ಅರಸನ ಕಿರೀಟದ ಪರಿ
ಪರಿಯ ಸೊಬಗು ಕಂಡು ಕೃತಾರ್ಥನಾದೆ ನಾ ೧

## ಮಠ್ಯತಾಳ

ಇಂದಿನ ದಿನ ಸುದಿನ ಗೋವಿಂದನ ಕಂಡ ಕಾರಣ
ಹಿಂದಣ ಪಾಪ ವೃಂದವು ಬೆಂದುಹೋಯಿತು ಎನಗೆ
ಹಾ ಹಾ ನಂಬು ಮನವೆ
ಮುಂದಣ ಮುಕುತಿ ದೊರಕಿತು ಎನಗೆ ಎನ್ನ
ತಂದೆ ಹಯವದನ ನೊಲವಿಂದ ೨

## ತ್ರಿಪುಟತಾಳ

ಪಾಪಕಂಜೆನೊ ಸಂತಾಪಕಂಜೆನೊ ನಾನು
ಪಾಪಿಜನರ ಬಲು ಕೋಪಕಂಜೆನೊ ನಾನು

ಆಪತ್ತಿಗಂಜೆನು ಯಮನ ಪಾಶಕಂಜೆನೊ ಅನ್ಯ
ರಪಾಯ ಮಾಡೆನೊ ತಾಪಸರಿಗೊಲಿದ
ಶ್ರೀಪತಿ ಹಯವದನ ಆ ಪಾದ ಪದ್ಮ ನೆನಹೊಂದಿದ್ದರೆ
ಸಾಕು ೩

**ರೂಪಕತಾಳ**

ಗುರುಭಕುತಿ ಬೇಕು ಹಿರಿಯರ ಕರುಣಬೇಕು
ಹರಿಕಥೆಗಳ ನಿತ್ಯ ಕೇಳುತ ಇರಬೇಕು
ವಿರಕುತಿ ಬೇಕು ವಿಷ್ಣುವಿನಾರಾಧನೆ ಬೇಕು
ವರಮಂತ್ರ ಜಪಬೇಕು ತಪಬೇಕು ಪರಗತಿಗೆ
ಪರಿಪರಿ ವ್ರತಬೇಕು ಸಿರಿ ಹಯವದನನ
ಪರಮಾನುಗ್ರಹಬೇಕು ವಿಷಯ ನಿಗ್ರಹಬೇಕು ೪

**ಝಂಪೆತಾಳ**

ಹರಿಸಗುಣ ಸಾಕಾರ ಸಕಲ ಸುರರೊಡೆಯ ನಿ
ರ್ಜರರೆಲ್ಲ ಹರಿಯ ಕಿಂಕರರೆಂದರಿಯಬೇಕು
ಮರಣ ಜನನಾದಿಗಳಿಗತಿ ದೂರತರನೆನಿಪ
ಸ್ಮರಣೆ ಸಂತತ ಬೇಕು ದುರ್ವಚನ ಬಿಡಬೇಕು
ಸಿರಿ ಹಯವದನ ಶೇಷಗಿರಿಯರಸನ ನಾಮ
ಸ್ಮರಣೆಯಿಂದ ಸಂಸಾರ ಭಯವನುತ್ತರಿಸಬೇಕು ೫

**ಆದಿತಾಳ**

ಶ್ರೀನಾಥ ಪ್ರಭುವೆತ್ತ ಹೀನ ಯೋನಿಗಳಲ್ಲಿ
ನಾನಾದುಃಖವನುಂಬ ಹೀನಮಾನವನೆತ್ತ
ಭಾನು ಮಂಡಲವೆತ್ತ ಶ್ವಾನಸುಲ್ಬಣವೆತ್ತ
ಮಾನಪ ಹರಿಯೆ ನಾನೆನ್ನಲಿಬೇಡ
ದಾನವ ಕುಲವೈರಿ ಹಯವದನ ವೆಂಕಟ
ಶ್ರೀನಿವಾಸನ ದಾಸನ ದಾಸನೆಂದೆನಿಸಿಕೊ ೬

ಏಕತಾಳ

ಕೈವಲ್ಯವನೀವ ನಮ್ಮ ಶ್ರೀವಲ್ಲಭನ ಕೃಪೆಯಿಂದ
ನೀವೆಲ್ಲ ಕ್ಷುದ್ರವ ಬಿಡದೆ ಯಾವಲ್ಲಿಗೂ ಹೋಗದಿರಿ
ಸಾವಿಲ್ಲದ ಮುಕುತಿ ಪಥವ ಬೇಡಿಕೊಳ್ಳಿರೊ
ನೋವಿಲ್ಲದಂತೆ ಸುಖಿಸ ಬಲ್ಲರೆಲ್ಲರೂ
ಕೋವಿದರೆಲ್ಲರು ಆವಾವಲ್ಲಿಗೆ ಪೋಗದಿರಿ
ಪೂವಿಲ್ಲನಯ್ಯ ವೆಂಕಟಪತಿ ಹಯವದನನ್ನ ಪ
ದ–ವಲ್ಲದನ್ಯತ್ರ ಭಯತಪ್ಪದೊ ೭

ತ್ರಿಪುಟತಾಳ

ಗಾತ್ರವ ಬಳಲಿಸಿ ಸ್ತೋತ್ರದಿಂ ಪಾಡುತ್ತ
ಯಾತ್ರೆಯ ಮಾಡಿ ವೆಂಕಟಪತಿಯ ಮೂರ್ತಿಯ
ನೇತ್ರದಿಂ ನೋಡಿ ತಮ್ಮಿಷ್ಟವ ಪಡೆವ ಸ
ದ್ಭಕ್ತ ಜನರ ಕಂಡು ಮನದ ಭ್ರಮೆಯ ಬಿಡು
ದೈತ್ಯ ಪೌಂಡ್ರಕನ ಮತವನೆಚ್ಚಿ ಕೆಡಬೇಡ
ಚಿತ್ರ ಚರಿತ್ರ ಹಯವದನನ್ನೋಲೈಸಿಕೊ ೮

ಆದಿತಾಳ

ಡಿಲ್ಲಿಯರಾಯನ ಕಂಡು ಪುಲ್ಲಿಗೆಯ ಬೇಡುವರೆ
ತಲ್ಲೆಯೂರಿ (ತಲೆಯೂರಿ) ತಪಸು ಇದ್ದಲ್ಲಿ ಸಾಧಿಸಿಕೊಳ್ಳಿರೊ
ಕ್ಷುಲ್ಲಕರೆಂಜಲನುಂಡು ಬಾಳ್ವರನೋಡು ಲಕ್ಷ್ಮೀ
ವಲ್ಲಭನಲ್ಲದೆ ಮಿಕ್ಕ ಹೀನರಲ್ಲಾಸೆ ಸಲ್ಲದು
ಚೆಲ್ವ ಹಯವದನ ತಿಮ್ಮನಲ್ಲದೆ ಈ ಕೈವಲ್ಯಕೆ
ಹಲ್ಲ ಹಂಚಿಕೆ ತೋರಿದಂತಲ್ಲಲ್ಲಿಗೆ ಪೋಗದಿರಿ ೯

ರೂಪಕತಾಳ

ಹನುಮಂತನ ನೋಡು ತನುಮನ ಧನಂಗ
ಳನು ನರಸಿಂಹಗರ್ಪಿಸುವ ಪ್ರಹ್ಲಾದನ ನೋಡು

ಅನುದಿನ ವನದೊಳು ತಪವ ಮಾಡುವ ಮುನಿ
ಜನರ ಕಂಡು ನಿನ್ನ ಮನದ ಭ್ರಮೆಯು ಬಿಡು
ಘನಮಹಿಮ ವೆಂಕಟಪತಿ ಹಯವದನನ
ನೆನೆವ ಭೃತ್ಯರ ಪರಿಚಾರಕರ ಭೃತ್ಯನೆನಿಸಿಕೋ ೧೦

ಜೊತೆ

ತಿರುಮಲರಾಯನ ತ್ರಿವಿಕ್ರಮರಾಯನ
ಸಿರಿ ಹಯವದನನ ಚರಣವೆ ಗತಿಯೆನ್ನು

೭೬ ರಾಗ ಸಾದನಾಮಕ್ರಿಯ ಆದಿತಾಳ

ಮಂಗಳಂ ಜಯ ಮಂಗಳಂ ಪ.

ನಿಗಮವ ತಂದ ಮತ್ಸ್ಯಗೆ ನಿತ್ಯಮಂಗಳ
ಅಗಣಿತ ಕೂರ್ಮಗೆ ಅತಿಮಂಗಳ
ಜಗವನುದ್ಧರಿಸಿದ ವರಹಗೆ ಮಂಗಳ
ಮಗುವ ಕಾಯ್ದ ನರಸಿಂಹನಿಗೆ ೧

ದಾನವ ಬೇಡಿದ ವಾಮನಗೆ ಮಂಗಳ
ಕ್ಷೋಣಿಪರನು ಕೊಂದಗೆ ಮಂಗಳ
ಜಾನಕಿದೇವಿಯ ರಮಣಗೆ ಮಂಗಳ
ಜ್ಞಾನಿಗಳ ಕಾಯ್ದ ಗೋಪಾಲಗೆ ೨

ಬುದ್ಧ ರೂಪದಲಿಹ ದೇವಗೆ ಮಂಗಳ
ಶುದ್ಧ ಅಶ್ವಾರೂಢಗೆ ಮಂಗಳ
ಮಧ್ವವಲ್ಲಭ ಹಯವದನಗೆ ಮಂಗಳ
ಉದ್ಧರಿಸುವ ದೇವರ ದೇವಗೆ ೩

೨೨ ರಾಗ ಕೇತಾರಗೌಳ ಝಂಪೆತಾಳ

ಯಾಕೆ ಮೈಮರೆತೆ ನೀನು ಪ.

ಯಾಕೆ ಮೈಮರೆತೆ ಹಯವದನನ ಪಾದವನು
ಬೇಕೆಂದು ಬಿಡದೆ ಭಜಿಸೋ-ನಿನ್ನ ಈ
ಕಾಕು ವ್ಯಸನಗಳ ತ್ಯಜಿಸೋ-ಈ ದೇಹ
ತಾಕಂಡ ಕನಸೋ ಸ್ಥಿರವಲ್ಲ
ನೀ ಕೇಳದಿರೆ ನಿನ್ನ ಕೆಡುವೆ ಮನಸೋ ಪ್ರಾಣಿ ಅ.

ಪರಹೆಣ್ಣುಗಳ ನೋಡಿ ಪಾಕಿಗಳ ನೀಪ್ಯಾಡಿ
ಹರಿದೆದ್ದು ಕಡೆಗೆ ಕರೆ -ನೀಹೋಗಿ
ಹರುಷದಿಂದವಳ ನೆರೆವೆ-ಎಲವೆಲವೊ
ಮರುಳ ಜೀವನವೆ ಧರವೆ-ಮತ್ತೊ
ಬ್ಬರಿಗೆ ಕರೆಕರೆದು ಪೇಳ್ವೆಯಲ್ಲೊ-ಶಾಸ್ತ್ರಗಳ
ನೊರೆದೊರೆದು ಕೇಳ್ವೆಯಲ್ಲೊ-ನೀಹೋಗಿ
ನರಕದಲಿ ಬೀಳ್ವೆಯಲ್ಲೊ-ಪ್ರಾಣಿ ೧

ಕೊಲೆದೋಷವೆಂದರಿತು ಕೊಸರಿ ಒಬ್ಬರ ಜರೆವೆ
ಇಳೆಯೊಳಗೆ ಆದಾವನೀತ-ನಿನಗೆ ನೀ
ತಿಳಿದುಕೋ ನಿನ್ನ ಮಾತ-ಪೇಳುವೆನು
ತೊಲಗದಿರು ಒಂದು ಮಾತ-ನಿನಗಿನ್ನು
ಬಲು ಸುಖವು ಬರುವದೇನೊ-ಸಿರಿಯು ತಾ
ತೊಲಗದಲೆ ನಿಲ್ವುದೇನೊ-ನಿನ್ನ ಈ
ಹುಳುಕು ಬುದ್ಧಿಯನು ಮಾಣೋ ಪ್ರಾಣಿ ೨

ಧನವ ಕೂಡಿಸಿಕೊಂಡು ದಾನಧರ್ಮವ ಮಾಡ
ಎನಗಾರು ಸಾಟಿ ಎಂಬೆ-ನೀನಿಷ್ಟು
ಜನರ ಬಿಟ್ಟೊಬ್ಬನೆಂಬೆ-ಎಲೆ ಮರುಳೆ
ಧನವೆ ಸುಖಸಾಧನವು ಎಂಬೆ-ಈ ಧನವು
ಮನಶುದ್ಧವಾಗಿ ಇಹುದೆ-ಆದ ಸಾವ

ದಿನಕೆ ಸಂಗಡ ಬಾರೆಂದೆ-ಕುಬೇರ
ನನು ಬಿಟ್ಟು ಕಡೆಗೆ ಹೋಗುವುದೆ ಪ್ರಾಣಿ ೩

ಆಳಿವಿಗೊಳಗಾದಾಟ ಆತ್ಮ ನಿನ್ನೊಡಾಟ
ಕಳೆದ ಬೆಳತಂತೆ ಕಾಣೊ-ದೇಹ ತಾ
ನುಳಿಯದು ಹಮ್ಮು ಮಾಣೊ-ಎಲೆಮರುಳೆ
ಗಳಿಸಿಕೊ ಧರ್ಮಗಳನು-ವ್ಯರ್ಥದಿನ
ಗಳ ಕಳೆಯುವಿರು ನಿತ್ಯವಲ್ಲ-ಮನೆಯಲ್ಲಿ
ಉಳಿದರ್ಥವದು ಕೆಲಸಕಿಲ್ಲ-ನಿನ್ನ ಬಳಿ
ವಿಡಿದು ಬಹರೊಬ್ಬರಿಲ್ಲ ಪ್ರಾಣಿ ೪

ಪಜ್ಞ್ತಭೇದವಮಾಡಿ ಪಾತಕರ ಒಡಗೂಡಿ
ಅಂತಕನ ಬಾಧೆಯಲ್ಲಿ-ಸಿಲುಕಿ ಗತಿ
ಎಂತೆಂದು ತೊಳಲಿ ಬಳಲಿ- ಎಲೆಮರುಳೆ
ಚಿಂತಿಸುವೆ ಬಹುಪರಿಯಲಿ-ಪಾಪಗಳ
ಸಂತಸದಿ ಮಾಳ್ಪೆ ನಿನ್ನ-ಸಿರಿಯಿಂದ
ಭ್ರಾಂತನಾಗಿರುವೆ ಮುನ್ನ-ಸುಜ್ಞಾನ
ವಿಂತಿಲ್ಲ ಸರ್ವಶೂನ್ಯ ಪ್ರಾಣಿ ೫

ಸಿರಿಯು ದಾರಿದ್ರ್ಯಗಳು ಸ್ಥಿರವಲ್ಲ ಸಿದ್ಧವಿದು
ಅರಿತರಿತು ಮರೆವುದೇನೋ-ಬಹುದುಃಖ
ಬರುವುದು ಮುಂದೆ ಕಾಣೋ-ಕುರುಡ ತಾ
ಸರವೆಯು ಹೆಾಸದ ತೆರನು-ಆಗದಲೆ
ಸೆರೆಬಲ್ಲ ಯೋಗಿಯಾಗೊ-ಶ್ರೀಹರಿಯ
ಶರಣರಿಗೆ ಶಿರವಬಾಗೊ-ನಿನ್ನ ಈ
ದುರುಳ ವಿಚಾರಗಳ ನೀಗೊ ಪ್ರಾಣಿ ೬

ನೆಚ್ಚದಿರು ದೇಹವನು ನಗುತ ಬಿಡು ಮೋಹವನು
ಎಚ್ಚತ್ತು ಮುಂದೆ ನೀನು-ಬದುಕುವುದು
ಉಚ್ಚರಿಸಿ ಪೇಳ್ವೆ ನಾನು-ಎಲೆ ಮರುಳೆ

ಮುಚ್ಚು ಮರೆಯಾಕೆ ಇನ್ನು-ಅಚ್ಯುತನ
ನಿಚ್ಚ ನಿಜಭಕ್ತಿಯಿಂದ-ಪೂಜಿಸಲು
ತುಚ್ಛ ಸಂಬಂಧ ಬಂಧ-ಪೋಗುವುದು
ಅಚ್ಯುತನ ಕಟಾಕ್ಷದಿಂದ-ಪ್ರಾಣಿ ೨

ತೀರ್ಥಯಾತ್ರೆಯ ಮಾಡಿ ತೆರತೆರದ ವ್ರತಮಾಡೆ
ಚಿತ್ತಶುದ್ಧಿ ಯಿಲ್ಲದನಕ-ಫಲವೇನು
ವ್ಯರ್ಥ ಕೇಳೆಲವೊ ನರಕ-ಮೃತ್ಯುವಿಗೆ
ತುತ್ತಾಗಿ ಹೋಗದನಕ-ಎಚ್ಚತ್ತು
ಚಿತ್ತಜನ ಪಿತ್ತಹರಿಯು-ನೀನೀಗ
ಚಿತ್ತದಿಂ ಭಜಿಸು ಸಿರಿಯು-ಕೊಡುವ ಪುರು
ಷೋತ್ತಮನ ಮಹಿಮೆಯರಿಯು ಪ್ರಾಣಿ ೩

ಮರೆತು ಕಳೆ ಕ್ರೋಧವನು ಮಾಡದಿರು ಲೋಭವನು
ಗುರು ಹಿರಿಯರಂಘ್ರಿಗಳಿಗೆರಗೊ-ಅನಾ
ಥರಿಗೆ ಚೆನ್ನಾಗಿ ಮರುಗೊ-ಇದೇ
ಪರಗತಿಗೆ ಇನ್ನು ಶರಗೊ-ಸಿರಿಯರಸ
ಹಯವದನ ನೊಲವಿಂದ ನೆನೆಯೊ-ನಿನ್ನ ಬಹು
ದುರಿತ ಸಂಕಲೆಗಳನು ಕಡಿಯೊ-ಸ್ಥಿರವಾದ
ಪರಮ ಪದವಿಯನು ಪಡೆಯೊ-ಪ್ರಾಣಿ ೪

## ೭೮ ಉಗಾಭೋಗ

ಆಡಿಗಾಧಾರವಿಲ್ಲ ಹಿಡಿವುದಕೆ ಕೊಂಬಿಲ್ಲ
ಕಡೆಹಾಯಿಸುವರಿಲ್ಲ ಕಷ್ಟಪಟ್ಟೇನಲ್ಲ
ಕಣ್ಣೀರು ಬಿಡಲಿಲ್ಲ ಕಾಯಸುಖಪಡಲಿಲ್ಲ
ಊಣಹೋಗಿ ಬಾಯಿ ಮರೆತಂತಾಯಿತಲ್ಲ
ಬಡತನವು ಬಿಡಲಿಲ್ಲ ಭಂಗಪಟ್ಟೇನಲ್ಲ
ಗರುಡ ಸರ್ಪನ ಸ್ನೇಹದಂತಾಯಿತಲ್ಲ
ಎನ್ನ ಕಷ್ಟವಾರ ಮುಂದುಸುರಲೊ ಶ್ರೀ ಹಯವದನ ರಾಯ

೭೯ ರಾಗ ನಾದನಾಮಕ್ರಿಯ ಆದಿತಾಳ

ಪಾವನ ಮಾಡುವುದು ನಾಮಾಮೃತರಸ
ಪಾವನ ಮಾಡುವುದು ಪ.

ಪಾವನ ಮಾಳ್ಪದು ನಾಮಸ್ಮರಣೆಯು
ಭೂವಲಯದೊಳು ಈವುದಿಷ್ಟಾರ್ಥವ ಅ

ಶ್ರೀನಿವಾಸನಾ ನಾಮಸುಧಾರಸ
ಏನು ರುಚಿಯೊ ಕಾಣೆ ಜೇನು ತುಪ್ಪದಂತೆ ೧

ಸಕ್ಕರೆ ಬೆರೆಸಿದ ಚೊಕ್ಕ ಪಾನಕದಂತೆ
ಮುಕ್ಕ ಮಾಣಿಸುತಿದೆ ರಕ್ಕಸಾರಿಯ ಧ್ಯಾನ ೨

ಕದಳಿ ಖರ್ಜೂರ ದ್ರಾಕ್ಷಿ ಇದಕೂ ಇಮ್ಮಿಗಿಲಾಗಿ
ಮುದಕೊಡುವುದು ಜಿಹ್ವೆಗೊದಗಿದ ತತ್‌ಕ್ಷಣ ೩

ಕಾಸಿದ ಕೆನೆಪಾಲ ದೂಷಿಸುವಂತಿದೆ
ಏನು ರುಚಿಯೊ ಹರಿದಾಸರೆಲ್ಲರಿಗೆ ೪

ಹಯವದನನ ನಿರ್ಭಯದಿ ಭಜಿಸಲು
ದಯಮಾಡುವ ಸಾಯುಜ್ಯ ಪದವನಿತ್ತು ೫

೮೦ ರಾಗ ಆರಭಿ ಝಂಪೆತಾಳ

ಈ ಮುದ್ದು ಕೃಷ್ಣನ ಕ್ಷಣದ ಸುಖವೇ ಸಾಕು ಪ.

ಶ್ರೀ ಮಧ್ವಮುನಿ ತಂದ ಉಡುಪೀಶನ ಅ.

ಚೆಲುವ ಚರಣದ್ವಂದ್ವ ಜಂಘೆ ಜಾನೂರು ಕಟಿ
ವಳಿ ಪಟ್ಟೆ ಜಠರ ವಕ್ಷಸ್ಕಂಬುಕಂಧರದಿ
ನಳಿತೋಳು ಮುದ್ದುಮುಖ ನಯನ ನಾಶಿಕ ಕರ್ಣ
ಸುಳಿಗುರುಳು ಮಸ್ತಕದ ನಳಿನನಾಭನ ಸೊಬಗು ೧

ಕಿರುಗೆಜ್ಜೆ ಕಡಿಪೆಂಡೆ ಘಂಟಾ ಕಟಿಸೂತ್ರ
ವರಹಾರ ಪದಕ ಶ್ರೀವತ್ಸ ಕೌಸ್ತುಭ ರತ್ನ
ಉರುಮುದ್ರೆ ಕಂಕಣಾಂಗದ ಕುಂಡಲ ಪ್ರಭಾ
ಸಿರಿನಾಮ ಮಕುಟನಾಸಿಕದ ವರಮಣಿಯು ೬

ಸಕಲ ದೇವೋತ್ತಮನೆ ಸರ್ವಗುಣ ಸಂಪೂರ್ಣ
ಅಖಿಳಾಗಮಸ್ತುತನೆ ಅಪ್ರಾಕೃತನೆ
ಅಖಿಳ ಜೀವರ ಭಿನ್ನ ನೆನಿಪ ಹಯವದನನೆ
ಮುಕುರ ಕಣಗೋಲು ನೇಣುಸಹಿತ ಪಿಡಿದಿಹ ಸ್ವಾಮಿ ೭

## ೮೧ ರಾಗ ಪೂರ್ವಿ ಆದಿತಾಳ

ಎಂತು ವರ್ಣಿಸಲಮ್ಮ ನಾನು
ಕಂತುಜನಕ ನಾನಂತ ನಗವ್ಯಾಸ ನನಂತವತಾರವ ಪ.

ಸಂತತ ಸಜ್ಜನರಂತ ರಂಗದಲಿ
ನಿಂತಿಹ ಲಕ್ಷ್ಮೀಕಾಂತನ ಮಹಿಮೆಯ ಅ.

ನೀರೊಳಾಡುತ ಭಾರವ ಹೊರೆವ
ಧಾರುಣಿಯ ಪೊರೆವ
ಘೋರ ರೂಪದಲಿ ಭೂಮಿಯನಳೆವ
ಕ್ರೂರ ನೃಪರಳಿವ
ಆ ರಾವಣನ ಬಲವ ಮುರಿವ
ಜೋರ ದಿಗಂಬರವ
ಚಾರು ಕುದುರೆಯನೇರಿ ಬರುವ ಸುಕು
ಮಾರ ಜಗದೊಳು ಶೂರ
ಜಾರುವ ಕಠಿಣ ಶರೀರದಿ ಭೂಮಿಯ
ಸೇರುವ ಕಂಭ ವಿದಾರಣ ಮಾಡುವ
ಮೀರುವ ಭುವನಕೆ ತೋರುವ ಪರಶುವ
ವಾರಿಧಿ ಶೋಷಕ ಜಾರ ವಸನ ಹೀನ
ಧೀರ ಸುಅಶ್ವವನೇರಿ ಮೆರೆವನ ೧

ನಿಗಮೋದ್ಧರಿಸುವ ನಗವನು ತರುವ
ಜಗತಿಯುದ್ಧರಿಸುವ
ಮಗುವ ಪಾಲಿಸುವ ಮಾಯದಿ ಬೆಳೆವ
ದುಗುಡ ನೃಪಕುಲವ
ಬಗಿದು ಭಾಸ್ಕರ ತನಯನಿಗೊಲಿವ
ನೆಗಹಿ ಗೋವರ್ಧನವ
ಬಗೆಬಗೆ ಮಾತಾಡಿ ಸುಗುಣ ವಾಜಿಯನೇರಿ ಬಂದ
ಸಚ್ಚಿದಾನಂದ
ಹುಗಿದು ಸೋಮಕನ ಅದ್ರಿಗೆ ಬೆನ್ನಿತ್ತು
ಅಗಿದು ಭೂಮಿಯ ನರಮೃಗನಾಗುತ
ಗಗನಕೆ ಬೆಳೆದು ಘಾತಿಸಿ ಕ್ಷತ್ರಿಯರ
ರಘುವರ ಯದುಪತಿ ವಿಗತ ವಸನನಾಗಿ
ಜಗಕೆ ಬಲ್ಲಿದ ಹಯವೇರಿ ಬರುವನ ೨

ನಳಿನೋದ್ಭವನಿಗಾಗಮವ ನಿತ್ತ
ಗಿರಿಯ ನಿಲಿಸಿತ್ತ
ಇಳೆಯ ಕದ್ದೊಯ್ದ ದಾನವನಳಿದ
ನರಹರಿ ತಾನಾದ
ಬಲಿಮುಖವ ಮುರಿದ ಖಳಭೂಪರಳಿದ
ದಶ ಶಿರನಳಿದ
ಕೊಳಲನೂದಿದ ದುಷ್ಟ ಲಲನೇರ ವ್ರತವಳಿದ
ಕಲಿಯ ಮರ್ದಿಸಿದ
ಹೊಳೆವ ಬೆನ್ನಲಿ ಗಿರಿತಳವೆತ್ತಿದನ
ನೆಲನ ಬಗೆದು ಕಂಭದಲಿ ಬಂದವನ
ಬೆಳೆದ ಬೊಮ್ಮಾಂಡಕೆ ಭಾರ್ಗವಾಧಿಪನ
ಜಲವ ಬತ್ತಿಸುವ ಗೋವಳ ಬುದ್ಧ ಕಲ್ಕಿ
ಚೆಲುವ ಹಯವದನನ ಬಲ್ಲಿದನ ೩

೮೨ ರಾಗ ಜಂಜೂಟಿ ರೂಪಕತಾಳ

ಎನ್ನನುದ್ಧರಿಸಲಾಗದೆ ಚನ್ನರಾಯ
ಎನ್ನನುದ್ಧರಿಸಲಾಗದೆ ಪ.

ಎನ್ನನುದ್ಧರಿಸಲಾಗದೆ ಚನ್ನರಾಯ ಬಿನ್ನೈಸುವೆ
ಇನ್ನು ಬೇರೆಗತಿಯ ಕಾಣೆ ನಿನ್ನಪಾದ ಪದುಮದಾಣೆ ಅ.

ಶರಣ ಜನರ ಪಾಲ ಕಲ್ಪತರು ದಯಾಸ್ವರೂಪನೆಂದು
ಧರೆಯೊಳಖಿಳ ನಿಗಮ ಪುಸುರುತಿರಲು ನಿನ್ನ ಚರಣವನ್ನು
ತಿರದೊಳಾಂತೆ ಎನ್ನಮೇಲಣ-ಕರುಣವಿಲ್ಲ
ದಿರಲು ನಿನಗದೇನು ಕಾರಣ-ಸಲಹಬೇಕು
ಸುರರ ಮಸ್ತಕದ ಭೂಷಣ-ಚನ್ನರಾಯ ೧

ಹಿಂದೆ ನಾನನಾಥನಾಗಿ ನೊಂದು ಹಲವು ಜನ್ಮದಲ್ಲಿ
ಬಂದು ನರಕ ಯಾತನಿಂದ ಬೆಂದು ಬಳಲಿ ಬಾಯ ಬಿಡುತ
ಒಂದೆ ನಿನ್ನ ಹೆಸರುಗೊಂಡೆನೊ-ಸನಾಥನಾಗಿ
ಮುಂದೆ ನಾಮ ಸುಧೆಯನುಂಡೆನೊ-ನೀ ಕೃಪಾಳು
ಎಂದು ನುಡಿವರನ್ನು ಕಂಡೆನೊ-ಚನ್ನರಾಯ ೨

ಹಲವು ಮಾತನಾಡಲೇಕೆ ಒಲಿವುದಿನ್ನು ಹರಿಯೆ ನಿನ್ನ
ಸಲಿಗೆಯಿಂದ ಬಿನ್ನಪವನು ಸಲಿಸುತಿಹೆನು ಮುಂದಕಿನ್ನು
ಜಲುಮ ಬಾರದಂತೆ ವರವನು-ಇತ್ತು ಎನ್ನ
ಸಲಹೊ ನಿನಗೆ ಕರವ ಮುಗಿವೆನು-ಮುಂದೆ ಮುಕುತಿ
ಲಲನೆಯೊಡನೆ ಸುಖದಲಿರುವೆನು-ಚನ್ನರಾಯ ೩

ಲೇಶವಾಯೆ ನಾನು ನಿನ್ನ ದಾಸನೆಂದು ಡಂಗುರವನು
ಹೊಯ್ಸಿ ತಿರುಗುತಿರಲು ಮೋಹ ಪಾಶವೆನ್ನ ಸುತ್ತಿಕೊಂಡು

ಘಾಸಿ ಮಾಡುತಿರಲು ಬಿಡಿಸದೆ-ಇರುವ ಪಂಥ
ವಾಸಿಯೇನೊ ಇನ್ನು ಆಲಿಸದೆ-ಸಲಹೊ ಸ
ರ್ವೇಶ ನಂಬಿದವನ ಕೆಡಿಸದೆ-ಚನ್ನರಾಯ ೮

ಎನ್ನ ದುರ್ಗುಣವನು ಮರೆದು ನಿನ್ನ ಸದ್ಗುಣವ ಪೊರೆದು
ಮನ್ನಿಸಿದರೆ ಲೋಕದೊಳಗೆ ಧನ್ಯನಹೆನು ಜನ್ಮವೆತ್ತಿ
ಉನ್ನತಾಹುದು ನಿನ್ನ ಕೀರುತಿ-ನಾಶವಹುದು
ಎನ್ನ ಭವದ ಬಹಳ ಧಾವತಿ-ಇನ್ನು ಸಲಹೊ
ಮಾನ್ಯ ಹಯವದನ್ನ ಮೂರುತಿ-ಚನ್ನರಾಯ ೨೪

೮೩ ರಾಗ ಸಾವೇರಿ ಝಂಪೆತಾಳ

ಹನುಮಂತ ನೀ ಬಲು ಜಯವಂತನೈಯ ಪ.

*ಅನುಮಾನ ಯತಿಯ ಆನಂದ ತೀರ್ಥಾರ್ಯ ಅ.

ರಾಮ ಸೇವಕನಾಗಿ ರಾವಣನ ಪುರವ ನಿ
ರ್ಧೂಮ ಮಾಡಿದ್ಯೊ ಒಂದು ನಿಮಿಷದೊಳಗೆ
ಭೂಮಿ ಪುತ್ರಿಗೆ ಮುದ್ರೆಯುಂಗುರವನಿತ್ತು ಚೂ
ಡಾಮಣಿಯನು ರಾಮ ಪಾದಕರ್ಪಿಸಿದೆ ೧

ಕೃಷ್ಣಾವತಾರದಲಿ ಭೀಮನಾಗ್ಯವತರಿಸಿ
ದುಷ್ಟ ದೈತ್ಯರನೆಲ್ಲ ಸಂಹರಿಸಿದೆ
ದೃಷ್ಟಿ ಹೀನನಾದ ಧೃತರಾಷ್ಟ್ರ ವಂಶವನು
ಕಷ್ಟವಿಲ್ಲದೆ ಕೊಂದು ಕೃಷ್ಣಗರ್ಪಿಸಿದೆ ೨

ಪತಿತ ಮಾಯಿಗಳು ಪುಟ್ಟಿ ಮತವೆಲ್ಲ ಕೆಡಿಸಲು
ಮತಿಹೀನರಾಗೆ ಸಜ್ಜನರೆಲ್ಲರು
ಅತಿವೇಗದಲಿ ಮಧ್ವ ಯತಿಯಾಗಿ ಅವತರಿಸಿ
ಗತಿಯ ತೋರಿಸಿದೆ ಹಯವದನನ ನಿಜದಾಸ ೩

---

*ಅನುಮಾನ= ತರ್ಕ

೮೪ ರಾಗ ಪಂತುವರಾಳಿ ಧ್ರುವತಾಳ

ಭೂರಿನಿಗಮವಕದ್ದ ಘೋರದೈತ್ಯನಗೆದ್ದ
ಸಾರವೇದಗಳ ವಿಧಿಗಿತ್ತ
ಸಾರವೇದಗಳ ವಿಧಿಗಿತ್ತ ಮತ್ಸ್ಯಾವ
ತಾರ ಗಾರುತಿಯ ಬೆಳಗಿರೆ ೧

ವಾರಿಧಿ ಮಥನದಿ ನೀರೊಳು ಗಿರಿ ಮುಳುಗೆ
ತೋರಿ ಬೆನ್ನಾಂತ ಸುರನುತ
ತೋರಿ ಬೆನ್ನಾಂತ ಸುರನುತ ಕೂರ್ಮಾವ
ತಾರ ಗಾರುತಿಯ ಬೆಳಗಿರೆ ೨

ಧಾತ್ರಿಯ ಕದ್ದೊಯ್ದ ದೈತ್ಯನ ಮಡುಹಿದ
ಎತ್ತಿ ದಾಡೆಯಲಿ ನೆಗಹಿದ
ಎತ್ತಿ ದಾಡೆಯಲಿ ನೆಗಹಿದ ವ-ರಾಹ
ಮೂರ್ತಿ ಗಾರುತಿಯ ಬೆಳಗಿರೆ ೩

ಕಡು ಬಾಲಕನ ನುಡಿಗೆ ಒಡೆದು ಕಂಭದೊಳುದಿಸಿ
ಒಡಲ ಶೀಳಿದ ಹಿರಣ್ಯಕನ
ಒಡಲ ಶೀಳಿದ ಹಿರಣ್ಯಕನ ನರಸಿಂಹ
ಒಡೆಯ ಗಾರುತಿಯ ಬೆಳಗಿರೆ ೪

ಸೀಮಾಧಿಪತಿ ಬಲಿಯ ಭೂಮಿ ಮೂರಡಿ ಬೇಡಿ
ಈ ಮೂರು ಜಗವ ಈರಡಿಯ
ಈ ಮೂರು ಜಗವ ಈರಡಿಮಾಡಿ ಅಳೆದ
ವಾಮನ ಗಾರುತಿಯ ಬೆಳಗಿರೆ ೫

ಕುಂಭಿಣಿ ಸುರರಿಗಾಗಿ ಕ್ಷತ್ರಿಯರ
ಸಂಭ್ರಮ ಕುಲವ ಸವರಿದ
ಸಂಭ್ರಮ ಕುಲವ ಸವರಿದ ಪರಶುರಾ
ಮೆಂಬ ಗಾರುತಿಯ ಬೆಳಗಿರೆ ೬

ತಂದೆ ಕಳುಹಲು ವನಕೆ ಬಂದಲ್ಲಿ ಸೀತೆಯ
ತಂದ ರಾವಣನ ತಲೆಹೊಯ್ದ
ತಂದ ರಾವಣನ ತಲೆಹೊಯ್ದ ರಘುರಾಮ
ಚಂದ್ರ ಗಾರುತಿಯ ಬೆಳಗಿರೆ ೭

ಶಿಷ್ಟ ಯಮಳಾರ್ಜುನರ ಭೀಷ್ಟವ ಸಲಿಸಿದ
ದುಷ್ಟ ಕಂಸನ್ನ ಕೆಡಹಿದ
ದುಷ್ಟ ಕಂಸನ್ನ ಕೆಡಹಿದ ನಮ್ಮ ಶ್ರೀ
ಕೃಷ್ಣ ಗಾರುತಿಯ ಬೆಳಗಿರೆ ೮

ರುದ್ರನ್ನ ತ್ರಿಪುರದೊಳಿದ್ದ ಸತಿಯರ
ಬುದ್ಧಿ ಭೇದಮಾಡಿ ಕೆಡಿಸಿದ
ಬುದ್ಧಿ ಭೇದವ ಮಾಡಿ ಕೆಡೆಸಿ ಬತ್ತಲೆ ನಿಂದ
ಬೌದ್ಧ ಗಾರುತಿಯ ಬೆಳಗಿರೆ ೯

ಪಾಪಿಜನ ಭಾರಕ್ಕೆ ಈ ಪೃಥ್ವಿ ಕುಸಿಯಲು
ತಾ ಪಿಡಿದು ಖಡ್ಗ ತುರಗವ
ತಾ ಪಿಡಿದು ಖಡ್ಗ ತುರಗವೇರಿದ ಕಲ್ಕಿ
ರೂಪ ಗಾರುತಿಯ ಬೆಳಗಿರೆ ೧೦

ಮುತ್ತೈದೆ ನಾರಿಯರು ಮುತ್ತಿನಾರುತಿ ಮಾಡಿ
ಹತ್ತವತಾರಿ ಹಯವದನ
ಹತ್ತವತಾರಿ ಹಯವದನನ ಪಾಡುತ
ಚಿತ್ರದಾರತಿಯ ಬೆಳಗಿರೆ ೧೧

## ಶ್ರೀ ಲಕ್ಷ್ಮೀ ಶೋಭನ ಹಾಡು

೮೫ ರಾಗ ಪಂತುವರಾಳಿ ಧ್ರುವತಾಳ

ಶೋಭನವೆನ್ನಿರೆ ಸುರರೊಳು ಸುಭಗನಿಗೆ
ಶೋಭನವೆನ್ನಿ ಸುಗುಣನಿಗೆ
ಶೋಭನವೆನ್ನಿರೆ ತ್ರಿವಿಕ್ರಮ ರಾಯಗೆ
ಶೋಭನವೆನ್ನಿ ಸುರಪ್ರಿಯಗೆ ಪ.

ಲಕ್ಷ್ಮೀನಾರಾಯಣರ ಚರಣಕ್ಕೆ ಶರಣೆಂಬೆ
ಪಕ್ಷಿವಾಹನ್ನಗೆರಗುವೆ
ಪಕ್ಷಿವಾಹನ್ನಗೆರಗುವೆ ಅನುದಿನ
ರಕ್ಷಿಸಲಿ ನಮ್ಮ ವಧೂವರರ ೧

ಪಾಲಸಾಗರವನ್ನು ಲೀಲೆಯಲಿ ಕಡೆಯಲು
ಬಾಲೆ ಮಹಲಕ್ಷ್ಮಿ ಉದಿಸಿದಳು
ಬಾಲೆ ಮಹಾಲಕ್ಷ್ಮಿ ಉದಿಸಿದಳಾ ದೇವಿ
ಪಾಲಿಸಲಿ ನಮ್ಮ ವಧೂವರರ ೨

ಬೊಮ್ಮನ ಪ್ರಳಯದಲಿ ತನ್ನರಸಿಯೊಡಗೂಡಿ
ಸುಮ್ಮನೆಯಾಗಿ ಮಲಗಿಪ್ಪ
ನಮ್ಮ ನಾರಾಯಣಗು ಈ ರಮ್ಮೆಗು ಅಡಿಗಡಿಗೆ
ಜನ್ಮವೆಂಬುವುದು ಅವತಾರ ೩

ಕಂಬು ಕಂಠದ ಸುತ್ತ ಕಟ್ಟಿದ ಮಂಗಳಸೂತ್ರ
ಅಂಬುಜವೆರಡು ಕರಯುಗದಿ
ಅಂಬುಜವೆರಡು ಕರಯುಗದಿ ಧರಿಸಿ ಪೀ
ತಾಂಬರವನುಟ್ಟು ಮೆರೆದಳೆ ೪

ಒಂದು ಕರದಿಂದ ಅಭಯವ ನೀವಳೆ ಮ
ತ್ತೊಂದು ಕರದಿಂದ ವರಗಳ
ಕುಂದಿಲ್ಲದಾನಂದ ಸಂದೋಹ ಉಣಿಸುವ
ಇಂದಿರೆ ನಮ್ಮ ಸಲಹಲಿ ೫

ಪೊಳೆವ ಕಾಂಚನದಾಮ ಉಲಿವ ಕಿಂಕಿಣಿಗಳು
ನಲಿವ ಕಾಲಂದಿಗೆ ಘಲುಕೆನಲು
ನಳನಳಿಸುವ ಮುದ್ದು ಮುಖದ ಚೆಲುವಿಕೆ ಲಕ್ಷ್ಮಿ
ಸಲಹಲಿ ನಮ್ಮ ವಧೂವರರ ೬

ರನ್ನದ ವೊಲೆಗಟ್ಟು ಚಿನ್ನದಾಭರಣಗಳ
ಚನ್ನೆ ಮಹಾಲಕ್ಷ್ಮಿ ಧರಿಸಿದಳೆ
ಚನ್ನೆ ಮಹಾಲಕ್ಷ್ಮಿ ಧರಿಸಿದಳಾ ದೇವಿ
ಮನ್ನಿಯ ವಧೂವರರ ಸಲಹಲಿ ೭

ಕುಂಭ ಕುಚದ ಮೇಲೆ ಇಂಬಿಟ್ಟ ಹಾರಗಳು
ತುಂಬಿಗುರುಳ ಮುಖ ಕಮಲ
ತುಂಬಿಗುರುಳ ಮುಖ ಕಮಲದ ಮಹಲಕ್ಷ್ಮಿ
ಇಂಬಿಟ್ಟು ಸಲಹಲಿ ವಧೂವರರ ೮

ಮುತ್ತಿನ ವಾಲೆಯನಿಟ್ಟಳೆ ಮಹಲಕ್ಷ್ಮಿ
ಕಸ್ತೂರಿತಿಲಕ ಧರಿಸಿದಳೆ
ಕಸ್ತೂರಿತಿಲಕ ಧರಿಸಿದಳಾದೇವಿ ಸ
ರ್ವತ್ರ ವಧೂವರರ ಸಲಹಲಿ ೯

ಅಂಬುಜನಯನಗಳು ಬಿಂಬಾಧರ ಶಶಿ
ಬಿಂಬದಂತೆಸೆವ ಮೂಗುತಿ ಮಣಿಯು
ಬಿಂಬದಂತೆಸೆವ ಮೂಗುತಿ ಮಣಿ ಮಹಲಕ್ಷ್ಮಿ
ಉಂಬುದಕೀಯಲಿ ವಧೂವರರ್ಗೆ ೧೦

ಮುತ್ತಿನಕ್ಷತೆಯಿಟ್ಟು ನವರತ್ನ ಮಕುಟವ
ನೆತ್ತಿಯಮೇಲೆ ಧರಿಸಿದಳೆ
ನೆತ್ತಿಯಮೇಲೆ ಧರಿಸಿದಳಾದೇವಿ
ಭಕ್ತಿಯ ಜನರ ಸಲಹಲಿ ೧೧

ಕುಂದಮಂದಾರ ಜಾಜಿ ಕುಸುಮಗಳ ವೃಂದವ
ಚೆಂದದ ತುರುಬಿಗೆ ತುರುಬಿದಳೆ
ಕುಂದಣ ವರ್ಣದ ಕೋಮಲೆ ಮಹಲಕ್ಷ್ಮಿ ಕೃಪೆ
ಯಿಂದ ವಧೂವರಗ ಸಲಹಲಿ ೧೨

ಎಂದೆಂದು ಬಾಡದ ಅರವಿಂದ ಮಾಲೆಯ
ಇಂದಿರೆ ಪೊಳೆವ ಕೊರಳಲ್ಲಿ
ಇಂದಿರೆ ಪೊಳೆವ ಕೊರಳಲ್ಲಿ ಧರಿಸಿದಳವ
ಳಿಂದು ವಧೂವರರ ಸಲಹಲಿ ೧೩

ದೇವಾಂಗ ಪಟ್ಟೆಯ ಮೇಲು ಹೊದಿಕೆಯ
ಭಾವೆ ಮಹಾಲಕ್ಷ್ಮಿ ಧರಿಸಿದಳೆ
ಭಾವೆ ಮಹಾಲಕ್ಷ್ಮಿ ಧರಿಸಿದಳಾದೇವಿ
ಸೇವಕ ಜನರ ಸಲಹಲಿ ೧೪

ಈ ಲಕ್ಷ್ಮಿದೇವಿಯು ಕಾಲುಂಗುರ ಘಲುಕೆನಲು
ಲೋಲಾಕ್ಷಿ ಮೆಲ್ಲನೆ ನಡೆತಂದಳು
ಸಾಲಾಗಿ ಕುಳ್ಳಿರ್ದ ಸುರರ ಸಭೆಯ ಕಂಡು
ಆಲೋಚಿಸಿದಳೆ ಮನದಲ್ಲಿ ೧೫

ತನ್ನ ಮಕ್ಕಳ ಕುಂದ ತಾನೇ ಪೇಳುವುದಕ್ಕೆ
ಮನ್ನದಿ (ಮನದಿ) ನಾಚೀ ಮಲಕ್ಷುಮಿ
ತನ್ನಾಮದಿಂದಲಿ ಕರೆಯದೊಬ್ಬೊಬ್ಬರ
ಉನ್ನಂತ ದೋಷಗಳ ನೆಣಿಸಿದಳು ೧೬

ಕೆಲವರು ತಲೆಯೂರಿ ತಪಗೈದು ಪುಣ್ಯವ
ಗಳಿಸಿದ್ದರೇನೂ ಫಲವಿಲ್ಲ
ಜ್ವಲಿಸುವ ಕೋಪದಿ ಶಾಪವ ಕೊಡುವರು
ಲಲನೆಯನಿವರು ಒಲಿಸುವರೆ ೧೭

ಎಲ್ಲಾ ಶಾಸ್ತ್ರವನೋದಿ ದುರ್ಲಭಜ್ಞಾನವ
ಕಲ್ಲಸಿ (ಕಲಿಸಿ) ಕೊಡುವ ಗುರುಗಳು
ಬಲ್ಲಿದ ಧನಕ್ಕೆ ಮರುಳಾಗಿವರಿಬ್ಬರು
ಸಲ್ಲದ ಪುರೋಹಿತಕ್ಕೊಳಗಾದರು ೧೮

ಕಾಮನಿರ್ಜಿತನೊಬ್ಬ ಕಾಮನಿಗೆ ಸೋತೊಬ್ಬ
ಭಾಮಿನಿಯ ಹಿಂದೆ ಹಾರಿದವ
ಕಾಮಾಂಧನಾಗಿ ಮುನಿಯ ಕಾಮಿನಿಯ ನೈದಿದನೊಬ್ಬ
ಕಾಮದಿಂ ಗುರುತಲ್ಪ ಗಾಮಿಯೊಬ್ಬ ೧೯

ನಶ್ವರೈಶ್ವರ್ಯವ ಬಯಸುವನೊಬ್ಬ ಪರ
ರಾಶ್ರಯಿಸಿ ಬಾಳುವನೊಬ್ಬ
ಹಾಸ್ಯವ ಮಾಡಿ ಹಲ್ಲ ಉದರಿಸಿಕೊಂಡವನೊಬ್ಬ
ಅ-ದೃಶ್ಯಂಘ್ರಿಯೊಬ್ಬ ಒಕ್ಕಣ್ಣನೊಬ್ಬ ೨೦

ಮಾವನ ಕೊಂದೊಬ್ಬ ಮರುಳಾಗಿಹ ಗಡ
ಹಾರ್ವನ ಕೊಂದೊಬ್ಬ ಬಳಲಿದ
ಜೀವರ ಕೊಂದೊಬ್ಬ ಕುಲಗೇಡೆಂದೆನಿಸುವ
ಶಿವನಿಂದ ಮತ್ತೊಬ್ಬ ಬಯಲಾದ ೨೧

ಧರ್ಮ ಉಂಟೊಬ್ಬನಲಿ ಹೆಮ್ಮೆಯ ಹೆಸರಿಗೆ
ಅಮ್ಮಮ್ಮ ತಕ್ಕ ಗುಣವಿಲ್ಲ
ಕ್ಷಮ್ಮೆಯ ಬಿಟ್ಟೊಬ್ಬ ನರಕದಲಿ ಜೀವರ
ಮರ್ಮವ ಮೆಟ್ಟಿ ಕೊಲಿಸುವ ೨೨

ಖಳನಂತೊಬ್ಬ ತನಗೆ ಸಲ್ಲದ ಭಾಗ್ಯವ
ಬಲ್ಲಿದಗಂಜಿ ಬರಿಕೈಯಾದ
ದುರ್ಲಭ ಮುಕ್ತಿಗೆ ದೂರನೆಂದೆನಿಸುವ ಪಾ
ತಾಳ ತಳಕ್ಕೆ ಇಳಿದ ಗಡ ೨೩

ಎಲ್ಲರಾಯುಷ್ಯವ ಶಿಂಶುಮಾರದೇವ
ಸಲ್ಲೀಲೆಯಿಂದ ತೊಲಗಿಸುವ
ಬಲ್ಲೆ ನಾನಿವರ ನಿತ್ಯ ಮುತ್ತೈದೆಯೆಂದು
ಬಲ್ಲವರೆನ್ನ ಭಜಿಸುವರು ೨೪

ಪ್ರಕೃತಿಯ ಗುಣದಿಂದ ಕಟ್ಟುವಡೆದು ನಾನಾ
ವಿಕೃತಿಗೊಳಗಾಗಿ ಭವದಲ್ಲಿ
ಸುಖದುಃಖ ಉಂಬ ಬ್ರಹ್ಮಾದಿ ಜೀವರು
ದುಃಖ ದೂರಳೆನಿಪೆನಗೆಣೆಯೆ ೨೫

ಒಬ್ಬನವನ ಮಗ ಮತ್ತೊಬ್ಬನವನ ಮೊಮ್ಮ
ಒಬ್ಬನವನಿಗೆ ಶಯನಾಹ
ಒಬ್ಬನವನ ಹೊರುವ ಮತ್ತಿಬ್ಬರವನಿಗಂಜಿ
ಅಬ್ಬರ (ಅಭ್ರ) ದಲಾವಾಗ ಸುಳಿವರು ೨೬

ಒಬ್ಬನವನ ನಾಮಕಂಜಿ ಬೆಚ್ಚುವಗಡ
ಸರ್ಬರಿಗವ (ಸರ್ವರಿಗೆ) ಅಮೃತವ
ಸರ್ಬರಿಗವ ಅಮೃತವನುಣಿಸುವನವ
ನೊಬ್ಬನೆ ನಿರಸಿಷ್ಟ ನಿರವದ್ಯ ೨೭

ನಿರನಿಷ್ಟ ನಿರವದ್ಯನೆಂಬ ಶೃತ್ಯರ್ಥವ
ಒರೆದು ನೋಡಲು ನರಹರಿಗೆ
ನರಕಯಾತನೆ ಸಲ್ಲ ದುಃತಾದಿ ದೂರನಿಗೆ
ಮರುಳಮನ ಬಂದಂತೆ ನುಡಿಯದಿರು ೨೮

ಒಂದೊಂದು ಗುಣಗಳು ಇದ್ದಾವು ಇವರಲ್ಲಿ
ಸಂದಣಿಸಿವೆ ಬಹು ದೋಷ
ಕುಂದೆಳ್ಳಷ್ಟಿಲ್ಲದ ಮುಕುಂದನೆ ತನಗೆಂದು
ಇಂದಿರೆ ಪತಿಯ ನೆನೆದಳು ೨೯

ದೇವರ್ಷಿ ವಿಪ್ರರ ಕೊಂದು ತನ್ನುದರದೊಳಿಟ್ಟು
ತೀವಿರ್ದ ಹರಿಗೆ ದುರಿತವ
ಭಾವಜ್ಞರೆಂಬರೆ ಆಗಾಲದೆಲೆಮೋಲಿ
ಶಿವನ ಲಿಂಗವ ನಿಲಿಸುವರೆ ೩೦

ಹಸಿವು ತೃಷೆ ಜರೆಮರಣ ರೋಗರುಜಿನಗಳೆಂಬ
ಅಸುರ ಪಿಶಾಚಗಳ ಭಯವೆಂಬ
ವ್ಯಸನ ಬರಬಾರದು ಎಂಬ ನಾರಾಯಣಗೆ
ಪಶು ಮೊದಲಾಗಿ ನೆನೆಯದು ೩೧

ತಾ ದುಃಖಿಯಾದರೆ ಸುರಾರ್ತಿಯ ಕಳೆದು
ಮೋದವೀವುದಕ್ಕೆ ಧರೆಗಾಗಿ
ಮಾಧವ ಬಹನೆ ಕೆಸರೊಳ್ಮುಳುಗಿದವ ಪರರ
ಬಾಧಿಪ ಕೆಸರ ಬಿಡಿಸುವನೆ ೩೨

ಬೊಮ್ಮನಾಲಯದಲ್ಲಿ ಇದ್ದವಗೆ ಲಯವುಂಟೆ
ಜನ್ಮಲಯವಿಲ್ಲದಿರುವನಿಗೆ
ಅಮ್ಮಿಯನುಣಿಸಿದ ಯಶೋದೆಯಾಗಿದ್ದಳೆ
ಅಮ್ಮ ಇವಗೆ ಹಸಿವು ತೃಷೆಯುಂಟೆ ? ೩೩

ಆಗ ಭಕ್ಷ್ಯಭೋಜ್ಯವಿತ್ತು ಪೂಜಿಸುವ
ಯೋಗಿಗಳುಂಟೆ ಧನಧಾನ್ಯ
ಆಗ ದೊರಕೊಂಬೋದೆ ಪಾಕ ಮಾಡುವ ವಹ್ನಿ
ಮ-ತ್ತಾವಾಗಲೆಲ್ಲಿಹುದು ವಿಚಾರಿಸಿರೊ ೩೪

ರೋಗವನೀವ ವಾತಪಿತ್ತಶ್ಲೇಷ್ಮ
ಆಗ ಕೂಡುವುದೇ ರಮೆಯೊಡನೆ
ಭೋಗಿಸುವವಗೆ ದುರಿತವ ನೆನೆವರೆ
ಈ ಗುಣನಿಧಿಗೆ ಎಣೆಯುಂಟೆ ? ೩೫

ರಮ್ಮೆದೇವಿಯುರನಪ್ಪಿಕೊಂಡಿಪ್ಪುದು
ರಮ್ಮೆಯರಸಗೆ ರತಿ ಕಾಣಿರೊ
ಅಮೋಘವೀರ್ಯವು ಚಲಿಸಿದರೆ ಪ್ರಳಯದಲಿ
ಕುಮ್ಮಾರರ್‍ಯಾಕೆ ಜನಿಸರು ೩೬

ಏಕತ್ರ ನಿರ್ಣೀತ ಶಾಸ್ತ್ರಾರ್ಥ ಪರತ್ರಾಪಿ
ಬೇಕೆಂಬ ನ್ಯಾಯವ ತಿಳಿದುಕೊ
ಶ್ರೀಕೃಷ್ಣನೊಬ್ಬನೆ ಸರ್ವದೋಷಕೆ ಸಿ
ಲುಕ್ಕನೆಂಬುದು ಸಲಹಲಿಕೆ ೩೭

ಎಲ್ಲ ಜಗವ ನುಂಗಿ ದಕ್ಕಿಸಿಕೊಂಡವಗೆ
ಸಲ್ಲದು ರೋಗ ರುಜಿನವು
ಒಲ್ಲ ವೈದ್ಯರ ಕೇಳಿ ಅಜೀರ್ತಿ? ಮೂಲವೆಲ್ಲ
ಇಲ್ಲ ಸಮಸ್ತ ರುಜಿನವು ೩೮

ಇಂಥಾ ಮೂರುತಿಯು ಒಳಕೊಂಬ ನರಕ ಬಹು
ಭ್ರಾಂತ ನೀನೆಲ್ಲಿ ತೋರುವೆಯೊ
ಸಂತೆಯ ಮರುಳ ಹೋಗೆಲೊ ನಿನ್ನ ಮಾತ
ಸಂತರು ಕೇಳಿ ಸೊಗಸರು ೩೯

ಶ್ರೀ ನಾರಾಯಣರ ಜನನಿ ಜನಕರ
ನಾನೆಂಬ ವಾದಿ ನುಡಿಯೆಲೋ
ಜಾಣರದರಿಂದರಿಯು ಮೂಲ ರೂಪವ ತೋರಿ
ಶ್ರೀ ನರಸಿಂಹನ ಅವತಾರ ೪೦

ಅಂಬುಧಿಯು ಉದಕದಲಿ ಒಡೆದು ಮೂಡಿದ ಕೂರ್ಮ
ನೆಂಬ ಶ್ರೀಹರಿಯು ಪಿತನ್ಯಾರು
ಎಂಬ ಶ್ರೀಹರಿಯು ಪಿತನ್ಯಾರು ಅವರಿಂದ ಸ್ವ
ಯಂಭುಗಳೆಲ್ಲ ಅವತಾರ ೪೧

ದೇವಕಿಯು ಗರ್ಭದಲಿ ದೇವನವತರಿಸಿದ
ಭಾವವನು ಬಲ್ಲ ವಿವೇಕಿಗಳು
ಈ ವಸುಧೆಯೊಳಗೆ ಕೃಷ್ಣಗೆ ಜನ್ಮವ
ಆವ ಪರಿಯಲ್ಲಿ ನುಡಿಯುವೆಲೊ ೪೨

ಆವಳಿಸುವಾಗ ಯಶೋದಾದೇವಿಗೆ
ದೇವ ತನ್ನೊಳಗೆ ಹುದುಗಿದ್ದ
ಭುವನವೆಲ್ಲವ ತೋರದುದಿಲ್ಲವೆ
ಆ ವಿಷ್ಣು ಗರ್ಭದೊಳಡಗುವನೆ ೪೩

ಆನೆಯು ಮಾನದೊಳಡಗಿಸಿದವರುಂಟೆ
ಅನೇಕ ಕೋಟಿ ಅಜಾಂಡವ
ಅಣುರೇಣು ಕೂಪದಲಿ ಆಳ್ದ ಶ್ರೀಹರಿಯು
ಜನನಿ ಜಠರವು ಒಳಕೊಂಬುದೆ ೪೪

ಆದರಿಂದ ಕೃಷ್ಣಗೆ ಜನ್ಮವೆಂಬುದು ಸಲ್ಲ
ಮದನನಿವನ ಕುಮಾರಕನು
ಕದನದಿ ಕಣೆಗಳ ನಿವನೆದೆಗೆಸೆವನೆ
ಸುದತೇರಿಗಿವನೆಂತು ಸಿಲುಕುವನೆ ೪೫

ಆದರಿಂದ ಕೃಷ್ಣನಿಗೆ ಪರನಾರಿ ಸಂಗ ಕೋ
ವಿದರಾದ ಬುಧರು ನುಡಿವರೆ
ಸದರವೆ ಈ ಮಾತು ಸರ್ವವೇದಂಗಳು
ಮುಗದಿಂದ ತಾವು ಸ್ತುತಿಸುವವು ೪೬

ಎಂದ ಭಾಗವತದ ಚಂದದ ಮಾತನು
ಮಂದ ಮಾನವ ಮನಸಿಗೆ
ತಂದುಕೊ ಜಗಕೆ ಕೈವಲ್ಯವೀವ ಮು
ಕುಂದಗೆ ಕುಂದು ಕೊರತೆ ಸಲ್ಲದು ೪೭

ಹತ್ತು ವರ್ಷದ ಕೆಳಗೆ ಮಕ್ಕಳಾಟಿಕೆಯಲ್ಲಿ
ಚಿತ್ತ ಸ್ತ್ರೀಯರಿಗೆ ಎರಗುವುದೆ
ಅರ್ಥಿಯಿಂದರ್ಚಿಸಿದ ಗೋಕುಲದ ಕನ್ಯೆಯರ
ಸತ್ಯ ಸಂಕಲ್ಪ ಬೆರೆಸಿದ್ದ ೪೮

ಹತ್ತು ಮತ್ತಾರು ಸಾಸಿರ ಸ್ತ್ರೀಯರಲ್ಲಿ
ಹತ್ತು ಹತ್ತು ನಿಪ ಕ್ರಮದಿಂದ
ಪುತ್ರರ ವೀರ್ಯದಲಿ ಸೃಷ್ಟಿಸಿದವರುಂಟೆ
ಅರ್ಥಿಯ ಸೃಷ್ಟಿ ಹರಿಗಿದು ೪೯

ರೋಮರೋಮಕೂಪ ಕೋಟಿ ವೃಕಂಗಳ
ನಿರ್ಮಿಸಿ ಗೋವಳರ ತೆರಳಿಸಿದ
ನಮ್ಮ ಶ್ರೀಕೃಷ್ಣನು ಮಕ್ಕಳ ಸೃಜಿಸುವ
ಮಹಿಮೆ ಬಲ್ಲವರಿಗೆ ಸಲಹಲಿಕೆ ೫೦

ಮಣ್ಣನ್ಯಾತಕೆ ಮೆದ್ದೆ ಎಂಬ ಯಶೋದೆಗೆ
ಸಣ್ಣ ಬಾಯೊಳಗೆ ಜಗಂಗಳ
ಕಣ್ಣಾರೆ ತೋರಿದ ನಮ್ಮ ಶ್ರೀಕೃಷ್ಣನ
ಘನತೆ ಬಲ್ಲವರಿಗೆ ಸಲಹಲಿಕೆ ೫೧

ನಾರದ ಸನಕಾದಿ ಮೊದಲಾದ ಯೋಗಿಗಳು
ಸಾರಿಯರಿಗೆ ಮರುಳಾಹರೆ
ಓರಂತೆ ಶ್ರೀಕೃಷ್ಣನಡಿಗಡಿ ಗೆರಗುವರೆ
ಆರಾಧಿಸುತ್ತ ಭಜಿಸುವರೆ ೫೨

ಅಂಬುಜ ಸಂಭವ ತ್ರಿಯಂಬಕ ಮೊದಲಾದ
ನಂಬಿದವರಿಗೆ ವರಪಿತ್ರ
ಸಂಭ್ರಮದ ಸುರರು ಎಳ್ಳಷ್ಟು ಕೋಪಕ್ಕೆ
ಇಂಬಿದ್ದರಿವನ ಭಜಿಸುವರೆ ೫೩

ಆವನಂಗುಷ್ಟವ ತೊಳೆದ ಗಂಗಾದೇವಿ
ಪಾವನಳೆನಿಸಿ ಮೆರೆಯಳೆ
ಜೀವನ ಸೇರಿದ ಪಾಪವ ಕಳೆವಳು
ಈ ವಾಸುದೇವಗೆ ಎಣೆಯುಂಟೆ ೫೪

ಕಿಲ್ಬಿಷವಿದ್ದರೆ ಅಗ್ರ ಪೂಜೆಯನು
ಸರ್ವರಾಯರ ಸಭೆಯೊಳಗೆ
ಉಬ್ಬಿದ ಮನದಿಂದ ಧರ್ಮಜ ಮಾಡುವನೆ
ಕೊಬ್ಬದಿರೆಲೊ ಪರವಾದಿ ೧೫

ಸಾವಿಲ್ಲದ ಹರಿಗೆ ನರಕ ಯಾತನೆಸಲ್ಲ
ಜೀವಂತರಿಗೆ ನರಕದಲಿ
ನೋವನೀವನು ನಿಮ್ಮ ಯಮದೇವನು
ಗೋವ ನೀ ಹರಿಯ ಗುಣವರಿಯ ೧೬

ನರಕವಾಳುವ ಯಮಧರ್ಮರಾಯ ತನ್ನ
ನರಜನ್ಮದೊಳಗೆ ಪೊರಳಿಸಿ
ಮರಳಿ ತನ್ನರಕದಲಿ ಪೊರಳಿಸಿ ಕೊಲುವನು
ಕುರಿ ನಿನ್ನ ಕುಹಕ ಕೊಳದು ಅಲ್ಲಿ ೧೭

ಬೊಮ್ಮನ ನೂರು ವರುಷ ಪರಿಯಂತ ಪ್ರಳಯದಲಿ
ಸುಮ್ಮನೆಯಾಗಿ ಮಲಗಿಪ್ಪ
ನಮ್ಮ ನಾರಾಯಣಗೆ ಹಸಿವು ತೃಷೆಜರೆ ಮರಣ
ದುಷ್ಕರ್ಮ ದುಃಖಗಳು ತೊಡಿಸುವರೆ ೧೮

ರಕ್ಕಸರಸ್ತ್ರಗಳಿಂದ ಘಾಯವಡೆಯದ
ಅಕ್ಷಯ ಕಾಯದ ಸಿರಿ ಕೃಷ್ಣ
ತುಚ್ಛ ಯಮಭಟರ ಶಸ್ತ್ರ ಕಳುಕುವನಲ್ಲ
ಹುಚ್ಚ ನೀ ಹರಿಯ ಗುಣವರಿಯ ೧೯

ಕಿಚ್ಚ ನಂಗಿದನು ನಮ್ಮ ಶ್ರೀಕೃಷ್ಣನು
ತುಚ್ಛ ನರಕದೊಳು ಅನಲನಿಗೆ
ಬೆಚ್ಚುವನಲ್ಲದರಿಂದವನಿಗೆ ನರಕ
ಮೆಚ್ಚುವರಲ್ಲ ಬುಧರೆಲ್ಲ ೨೦

ಮನೆಯಲ್ಲಿ ಕ್ಷಮೆಯು ತಾಳ್ದ ವೀರ ಭಟ
ರಣರಂಗದಲ್ಲಿ ಕ್ಷಮಿಸುವನೆ
ಅಣುವಾಗಿ ನಮ್ಮ ಹಿತಕೆ ಮನದೊಳಗಿನ ಕೃಷ್ಣ
ಮುನಿವ ಕಾಲಕ್ಕೆ ಮಹತ್ತಾಹ ೬೧

ತಾಯ ಪೊಟ್ಟೆಯಿಂದ ಮೂಲ ರೂಪವ ತೋರಿ
ಆಯುಧ ಸಹಿತ ಹೊರವಂಟ
ನ್ಯಾಯ ಕೋವಿದರು ಪುಟ್ಟಿದನೆಂಬರೆ
ಬಾಯಿಗೆ ಬಂದಂತೆ ಬೊಗಳದಿರು ೬೨

ಉಟ್ಟ ಪೀತಾಂಬರ ತೊಟ ಭೂಷಣಂಗಳು
ಇಟ್ಟ ನವರತ್ನದ ಕಿರೀಟವು
ಮೆಟ್ಟಿದ ಕುರುಹ ಎದೆಯಲ್ಲಿ ತೋರ್ದ ಶ್ರೀ
ವಿಠ್ಠಲ ಪುಟ್ಟಿದ ನೆನಬಹುದೆ ೬೩

ವೃಷಭ್ಹಂಸ ಮಹಿಷ ಮೂಷಕ ವಾಹನಪೇರಿ
ಮಾ--ನಿಸರಂತೆ ಸುಳಿವ ಸುರರೆಲ್ಲ
ಎಸೆವ ದೇವೇಶನ ಸಹಸಕ್ಕೆ ಮಣಿದರು
ಕುಸುಮ ನಾಭನಿಗೆ ಸರಿಯುಂಟೆ ೬೪

ಒಂದೊಂದು ಗುಣಗಳು ಇದ್ದಾವು ಇವರಲ್ಲಿ
ಸಂದಣಿಸಿವೆ ಬಹುದೋಷ
ಕುಂದೆಳ್ಳಷ್ಟಿಲ್ಲದ ಮುಕುಂದನೆ ತನಗೆಂದು
ಇಂದಿರೆ ಪತಿಯ ನೆನೆದಳು ೬೫

ಇಂತು ಚಿಂತಿಸಿ ರಮೆ ಸಂತ ರಾಮನ ಪದವ
ಸಂತೋಷ ಮನದಿ ನೆನೆವುತ್ತ
ಸಂತೋಷ ಮನದಿ ನೆನೆವುತ್ತ ತನ್ನಯ
ಕಾಂತನಿದ್ದೆಡೆಗೆ ನಡೆದಳು ೬೬

ಕಂದರ್ಪ ಕೋಟಿಯು ಗೆಲುವ ಸೌಂದರ್ಯದ
ಚೆಂದವಾಗಿರ್ದ ಚೆಲುವಿನ
ಇಂದಿರೆ ಕಂಡು ಇವನೆ ತನಗೆ ಪತಿ
ಎಂದವನ ಬಳಿಗೆ ನಡೆದಳು ೬೭

ಈ ತೆರದ ಸುರರ ಸುತ್ತನೋಡುತ ಲಕ್ಷ್ಮಿ
ಚಿತ್ತವ ಕೊಡದೆ ನಸುನಗುತ
ಚಿತ್ತವ ಕೊಡದೆ ನಸುನಗುತ ಬಂದು ಪುರು
ಷೋತ್ತಮನ ಕಂಡು ನಮಿಸಿದಳು ೬೮

ನಾನಾ ಕುಸುಮಗಳಿಂದ ಮಾಡಿದ ಮಾಲೆಯು
ಶ್ರೀನಾರಿ ತನ್ನ ಕರದಲ್ಲಿ
ಪೀನ ಕಂಧರದ ತ್ರಿವಿಕ್ರಮರಾಯನ ಕೊರ
ಳಿನ ಮೇಲಿಟ್ಟು ನಮಿಸಿದಳು ೬೯

ಉಟ್ಟ ಪೊಂಬಟ್ಟೆಯು ತೊಟ್ಟಾಭರಣಂಗಳು
ಇಟ್ಟ ನವರತ್ನದ ಮಕುಟವು
ದುಷ್ಟ ಮರ್ದನನೆಂಬ ಕಡೆಯ ಪೆಂಡೆಗಳು
ವಟ್ಟಿದ್ದ ಹರಿಗೆ ವಧುವಾದಳು ೭೦

ಕೊಂಬು ಚೆಂಬು ಕಹಳೆಗಳು ತಾಳ ಮದ್ದಳೆಗಳು
ತಂಬಟೆ ಭೇರಿ ಪಟಹಗಳು
ಭೊಂ ಭೊಂ ಎಂಬ ಶಂಖ ಡೊಳ್ಳು ಮೌರಿಗಳು
ಅಂಬುಧಿಯ ಮನೆಯುಲಿಸೆದವು ೭೧

ಅರ್ಘ್ಯಪಾದ್ಯಾಚಮನ ಮೊದಲಾದ ಷೋಡಶ
ನರ್ಘ್ಯ ಪೂಜೆಯ ನಿತ್ತಳಿಯನಿಗೆ
ಒಗ್ಗಿದ ಮನದಿಂದ ಧಾರೆಯೆರೆದನೆ ಸಿಂಧು
ಸದ್ಗತಿಯಿತ್ತು ಸಲಹೆಂದು ೭೨

ವೇದೋಕ್ತ ಮಂತ್ರ ಪೇಳಿ ವಸಿಷ್ಟ ನಾರದ ಮೊದ
ಲಾದ ಮುನೀಂದ್ರರು ಮುದದಿ
ವಧುವರರಮೇಲೆ ಶೋಭನದಕ್ಷತೆಯ
ಮೋದ ವೀವುತ್ತ ತಳಿದರು ೨೩

ಸಂಭ್ರಮದಿಂದಂಬರವಿ ದುಂದುಭಿ ಮೊಳಗಲು
ತುಂಬುರು ನಾರದರು ಸ್ತುತಿಸುತ್ತ
ತುಂಬುರು ನಾರದರು ಸ್ತುತಿಸುತ್ತ ಪಾಡಿದರು
ಪೀ-ತಾಂಬರ ಧರನ ಮಹಿಮೆಯ ೨೪

ದೇವ ನಾರಿಯರೆಲ್ಲ ಬಂದೊದಗಿ ಪಾಠಕರು
ಓವಿ ಪಾಡುತ್ತ ಕುಣಿದರು
ದೇವ ತರುವಿನ ಹೂವಿನ ಮಳೆಗಳ
ಶ್ರೀವರನಮೇಲೆ ಕರೆದರು ೨೫

ಮುತ್ತು ರತ್ನಗಳಿಂದ ಕೆತ್ತಿಸಿದ ಹಸೆಗೆ ನವ
ರತ್ನ ಮಂಟಪವ ಪಸರಿಸಿ
ನವ-ರತ್ನ ಮಂಟಪವ ಪಸರಿಸಿ ಕೃಷ್ಣನ
ಮುತ್ತೈದೆಯರೆಲ್ಲ ಕರೆದರು ೨೬

ಶೇಷಶಯನನೆ ಬಾ ದೋಷದೂರನೆ ಬಾ
ಭಾಸುರ ಕಾಯನೆ ಹರಿಯೆ ಬಾ
ಭಾಸುರಕಾಯನೆ ಹರಿಯೆ ಬಾ ಶ್ರೀಕೃಷ್ಣ
ವಿ-ಲಾಸದಿಂದೆಮ್ಮ ಹಸೆಗೆ ಬಾ ೨೭

ಕಂಜಲೋಚನನೆ ಬಾ ಮಂಜುಳಮೂರ್ತಿ ಬಾ
ಕುಂಜರ ವರದಾಯಕನೆ ಬಾ
ಕುಂಜರ ವರದಾಯಕನೆ ಬಾ ಶ್ರೀಕೃಷ್ಣ
ನಿ-ರಂಜನ ನಮ್ಮ ಹಸೆಗೆ ಬಾ ೨೮

ಆದಿಕಾಲದಲ್ಲಿ ಆಲದೆಲೆಯಮೇಲೆ
ಶ್ರೀ ದೇವಿಯರೊಡನೆ ಪವಡಿಸಿದ
ಶ್ರೀ ದೇವಿಯರೊಡನೆ ಪವಡಿಸಿದ ಶ್ರೀಕೃಷ್ಣ
ಮೋದದಿಂದೆಮ್ಮ ಹಸಗೆ ಬಾ ೨೯

ಆದಿಕಾರಣನಾಗಿ ಆಗ ಮಲಗಿದ್ದು
ಮೋದ ಜೀವರ ತನ್ನ ಉದರದಲ್ಲಿ
ಮೋದ ಜೀವರ ತನ್ನ ಉದರದಲಿಂಬಿಟ್ಟ
ಅನಾದಿ ಮೂರುತಿಯೆ ಹಸೆಗೆ ಬಾ ೩೦

ಚಿನ್ಮಯವೆನಿಪ ನಿಮ್ಮ ಮನೆಗಳಲ್ಲಿ
ಜ್ಯೋತಿರ್ಮಯವಾದ ಪದ್ಮದಲ್ಲಿ
ರಮ್ಮೆಯರೊಡಗೂಡಿ ರಮಿಸುವ ಶ್ರೀಕೃಷ್ಣ
ನಮ್ಮ ಮನೆಯ ಹಸೆಗೆ ಬಾ ೩೧

ನಾನಾವತಾರದಲಿ ನಂಬಿದ ಸುರರಿಗೆ
ಆನಂದವೀವ ಕರುಣಿ ಬಾ
ಆನಂದವೀವ ಕರುಣಿ ಬಾ ಶ್ರೀಕೃಷ್ಣ
ಶ್ರೀನಾರಿಯೊಡನೆ ಹಸೆಗೇಳು ೩೨

ಬೊಮ್ಮನಾಲಯದಲ್ಲ ರನ್ನದ ಪೀಠದಿ ಕುಳಿತು
ಒಮ್ಮನ ಸ್ನೇಹದಿ ಮಾಡುವ
ನಿರ್ಮಲ ಪೂಜೆಯ ಕೈಕೊಂಬ ಶ್ರೀಕೃಷ್ಣ
ಪರಮ ಮೂರುತಿಯೆ ಹಸೆಗೆ ಬಾ ೩೩

ಮುಖ್ಯ ಪ್ರಾಣನ ಮನೆಯಲ್ಲಿ ಭಾರತಿಯಾಗ
ಲಿಕ್ಕಿ ಬಡಿಸಿದ ರಸಾಯನವ
ಸಕ್ಕರೆಗೂಡಿದ ಪಾಯಸ ಸವಿಸುವ
ರಕ್ಕಸ ವೈರಿಯೆ ಹಸೆಗೆ ಬಾ ೩೪

ರುದ್ರನ ಮನೆಯಲ್ಲಿ ರುದ್ರಾಣಿ ದೇವಿಯರು
ಭದ್ರ ಮಂಟಪದಿ ಕುಳ್ಳಿರಿಸಿ
ಸ್ವಾದ್ವನ್ನಗಳ ಬಡಿಸಲು ಕೈಕೊಂಡ
ಮುದ್ದು ನರಸಿಂಹ ಹಸೆಗೆ ಬಾ ೨೫

ಗರುಡನ ಮೇಲೇರಿ ಗಗನ ಮಾರ್ಗದಲ್ಲಿ
ತೆರತೆರದಿ ಸ್ತುತಿಪ ಸುರಸ್ತ್ರೀಯರ
ಮೆರೆವ ಗಂಧರ್ವರ ಗಾನವ ಸವಿಸುವ
ನರಹರಿ ನಮ್ಮ ಹಸೆಗೆ ಬಾ ೨೬

ನಿಮ್ಮಣ್ಣನ ಮನೆಯ ಸುಧರ್ಮ ಸಭೆಯಲ್ಲಿ
ಉಮ್ಮೆಯರಸ ನಮಿಸಿದ
ಧರ್ಮ ರಕ್ಷಕನೆನಿಪ ಕೃಷ್ಣ ಕೃಪೆಯಿಂದ
ಪರಮ ಮೂರುತಿಯೆ ಹಸೆಗೆ ಬಾ ೨೭

ಇಂದ್ರನ ಮನೆಗ್ಹೋಗಿ ಅದಿತಿಗೆ ಕುಂಡಲವಿತ್ತು
ಅಂದದ ಪೂಜೆಯ ಕೈಗೊಂಡು
ಅಂದದ ಪೂಜೆಯ ಕೈಗೊಂಡು ಸುರತರುವ
ಇಂದಿರೆಗಿತ್ತ ಹರಿಯೆ ಬಾ ೨೮

ನಿಮ್ಮ ನೆನೆವ ಮುನಿ ಹೃದಯದಲಿ ನೆಲೆಸಿದ
ಧರ್ಮ ರಕ್ಷಕನೆನಿಸುವ
ಸಮ್ಮತವಾಗಿದ್ದ ಪೂಜೆಯ ಕೈಕೊಂಡ
ನಿ-ಸ್ಸೀಮ ಮಹಿಮ ಹಸೆಗೆ ಬಾ ೨೯

ಮುತ್ತಿನ ಸತ್ತಿಗೆ ನವರತ್ನ ಚಾಮರ
ಸುತ್ತ ನಲಿವಪ್ಸರ ಸ್ತ್ರೀಯರ
ಸತ್ಯವ ನೋಡುತ್ತ ಚಿತ್ರವಾದ್ಯಂಗಳ
ಸಂ-ಪತ್ತಿನ ಹರಿಯೆ ಹಸೆಗೆ ಬಾ ೩೦

ಎನಲು ನಗುತ ಬಂದು ಹಸೆಯಮೇಲೆ
ವಸಿತೆ ಲಕುಮಿಯೊಡಗೂಡಿ
ಅನಂತ ವೈಭವದಿ ಕುಳಿತ ಕೃಷ್ಣನ ನಾಲ್ಕು
ದಿನದುತ್ಸವವ ನಡೆಸಿದರು ೯೧

ಅತ್ತೀರೆನಿಪ ಗಂಗೆ ಯಮುನೆ ಸರಸ್ವತಿ
ಭಾ-ರತಿ ಮೊದಲಾದ ಸುರಸ್ತ್ರೀಯರು
ಮುತ್ತಿನಕ್ಷತೆಯನು ಶೋಭನವೆನುತಲಿ
ಅರ್ಥಿಯಳಿಯಗೆ ತಳಿದರು ೯೨

ರತ್ನದಾರತಿಗೆ ಸುತ್ತಮುತ್ತನೆ ತುಂಬಿ
ಮುತ್ತೈದೆಯರೆಲ್ಲ ಧವಳದ
ಮುತ್ತೈದೆಯರೆಲ್ಲ ಧವಳದ ಪದನ ಪಾ
ಡುತ್ತಲೆತ್ತಿದರೆ ಸಿರಿವರಗೆ (ಶೋಭಾನೆ) ೯೩

ಬೊಮ್ಮ ತನ್ನರಸಿ ಕೂಡೆ ಬಂದೆರಗಿದ
ಉಮ್ಮೆಯರಸ ನಮಿಸಿದ
ಅಮ್ಮರರೆಲ್ಲರು ಬಗೆಬಗೆ ಉಡುಗೆರೆ
ರಮ್ಮೆಯರಸಗೆ ಸಲಿಸಿದರು ೯೪

ಸತ್ಯಲೋಕದ ಬ್ರಹ್ಮ ಕೌಸ್ತುಭ ರತ್ನವನಿತ್ತ
ಮುಕ್ತ ಸುರರು ಮುದದಿಂದ
ಮುತ್ತಿನ ಕಂಠೀಸರ ಮುಖ್ಯ ಪ್ರಾಣನಿತ್ತ
ಮಸ್ತಕದ ಮಣಿಯ ಶಿವನಿತ್ತ ೯೫

ತನ್ನರಸಿಯ ಕೂಡೆ ಸವಿನುಡಿ ನುಡಿವಾಗ
ವದನದಲ್ಲಿದ್ದಗ್ನಿ ಕೆಡದಂತೆ
ವಹ್ನಿ ಪ್ರತಿಷ್ಠೆಯ ಮಾಡಿ ಅವನೊಳಗಿದ್ದ
ತನ್ನಾಹುತಿ ದಿಬ್ಬಣ ಸುರರ್ಗೆ ೯೬

ಕೊಬ್ಬಿದಖಳರೋಡಿಸಿ ಅಮೃತಾನ್ನ ಊಟಕ್ಕೆ
ಉಬ್ಬಿದ ಹರುಷದಲಿ ಉಣಿಸಲು
ಉಬ್ಬಿದ ಹರುಷದಲಿ ಉಣಿಸಬೇಕೆಂದು ಸಿಂಧು
ಸರ್ಬರಿಗೆಡೆಯ ಮಾಡಿಸಿದ ೯೭

ಮಾವನ ಮನೆಯಲ್ಲಿ ದೇವರಿಗೌತನವ
ದಾನವರು ಕೆಡಿಸದೆ ಬಿಡರೆಂದು
ದಾನವರು ಕೆಡಿಸದೆ ಬಿಡರೆಂದು ಶ್ರೀಕೃಷ್ಣ
ದೇವ ಸ್ತ್ರೀ ವೇಷವ ಧರಿಸಿದ ೯೮

ತನ್ನ ಸೌಂದರ್ಯದಿಂದುನ್ನಂತ ಮಯವಾದ
ಲಾ-ವಣ್ಯದಿ ಮೆರೆವ ನಿಜಪತಿಯ
ಹೆಣ್ಣು ರೂಪವ ಕಂಡು ಕನ್ಯೆ ಮಹಲಕ್ಷುಮಿ
ಇವ-ಗನ್ಯರ್ಯಾಕೆಂದು ಬೆರಗಾದಳು ೯೯

ಲಾವಣ್ಯ ಮಯವಾದ ಹರಿಯ ಸ್ತ್ರೀ ವೇಷಕ್ಕೆ
ಭಾವಕಿಯರೆಲ್ಲ ಮರುಳಾಗೆ
ಮಾವರ ಸುಧೆಯ ಕ್ರಮದಿಂ ಬಡಿಸಿ ತನ್ನ
ಸೇವಕ ಸುರರಿ ಗುಣಿಸಿದ ೧೦೦

ನಾಗನ ಮೇಲೆ ತಾ ಮಲಗಿದ್ದಾಗ
ಆಗಲೆ ಜಗವ ಜತನದಿ
ಆಗಲೆ ಜಗವ ಜತನದಿ ಧರಿಸೆಂದು
ನಾಗಬಲಿಯ ನಡೆಸಿದರು ೧೦೧

ಕ್ಷುಧೆಯ ಕಳೆವ ನವರತ್ನದ ಮಾಲೆಯ
ಮುದದಿಂದ ವಾರಿಧಿ ವಿಧಿಗಿತ್ತ
ಚದುರ ವರವ ವಾಯು ದೇವರಿಗಿತ್ತ
ವಿಧುವಿನ ಕಲೆಯ ಶಿವಗಿತ್ತ ೧೦೨

ಶಕ್ರ ಮೊದಲಾದ ದಿಕ್ಪಾಲಕರಿಗೆ
ಸೊಕ್ಕಿದ ಚೌದಂತ ಗಜಂಗಳ
ಉಕ್ಕಿದ ಮನದಿಂದ ಕೊಟ್ಟ ವರುಣದೇವ
ಮದು-ಮಕ್ಕಳಾಯುಷ್ಯ ಬೆಳೆಸೆಂದ ೧೦೩

ಮತ್ತೆ ದೇವೇಂದ್ರಗೆ ಪಾರಿಜಾತವನಿತ್ತ
ಚಿತ್ತವ ಸೆಳೆವಪ್ಸರ ಸ್ತ್ರೀಯರ
ಹತ್ತುಸಾವಿರ ಕೊಟ್ಟು ವರುಣ ದೇವ ಹರಿ
ಭಕ್ತಿಯ ಮನದಲಿ ಬೆಳೆಸೆಂದ ೧೦೪

ಪೊಳೆವ ನವರತ್ನದ ರಾಶಿಯ ತೆಗೆತೆಗೆದು
ಉಳಿದಮರರಿಗೆ ಸಲಿಸಿದ
ಉಳಿದಮರರಿಗೆ ಸಲಿಸಿದ ಸಮುದ್ರ
ಕಳುಹಿದ ನವರವರ ಮನೆಗಳಿಗೆ ೧೦೫

ಉನ್ನಂತ ನವರತ್ನ ಮಯವಾದ ಅರಮನೆಯ
ಚೆನ್ನೆ ಮಗಳಿಂದ ವಿರಚಿಸಿ
ತನ್ನ ಅಳಿಯಗೆ ಸ್ಥಿರವಾಗಿ ಮಾಡಿಕೊಟ್ಟ
ಇನ್ನೊಂದು ಕಡೆಯಡಿ ಯಿಡದಂತೆ ೧೦೬

ಹಯವದನ ತನ್ನ ಪ್ರಿಯಳಾದ ಲಕ್ಷ್ಮಿಗೆ
ಜಯವಿತ್ತ ಕ್ಷೀರಾಂಬುಧಿಯಲ್ಲಿ
ಜಯವಿತ್ತ ಕ್ಷೀರಾಂಬುಧಿಯಲ್ಲಿ ಶ್ರೀಕೃಷ್ಣ
ದಯದಿ ನಮ್ಮೆಲ್ಲರ ಸಲಹಲಿ ೧೦೭

ಈ ಪದನ ಪಾಡಿದ ವಾದಿರಾಜ ಮುನಿಗೆ
ಶ್ರೀಪತಿಯಾದ ಹಯವದನ
ತಾಪವ ಕಳೆದು ತನ್ನ ಶ್ರೀ ಚರಣ ಸ
ಮೀಪದಲಿಟ್ಟು ಸಲಹಲಿ ೧೦೮

ಇಂತು ಸ್ವಪ್ನದಿ ಕೊಂಡಾಡಿಸಿಕೊಂಡ ಲಕ್ಷ್ಮಿ
ಕಾಂತನ ಕಂದನೆನಿಸುವ
ಸಂತರ ಮೆಚ್ಚಿನ ವಾದಿರಾಜೇಂದ್ರ ಮುನಿ
ಪಂಥದಿ ಪೇಳಿದ ಪದವಿದು ೧೦೯

ಶ್ರೀಯರಸ ಹಯವದನ ಪ್ರಿಯ ವಾದಿರಾಜ
ರಾಯರಚಿಸಿದ ಪದವಿದು
ಆಯುಷ್ಯ ಭವಿಷ್ಯ ದಿನದಿನಕೆ ಹೆಚ್ಚುವುದು
ನಿ-ರಾಯಾಸದಿಂದ ಸುಖಿಪರು ೧೧೦

ಬೊಮ್ಮನ ದಿನದಲ್ಲಿ ಒಮ್ಮೊಮ್ಮೆ ಈ ಮದುವೆ
ಕ್ರಮದಿ ಮಾಡಿ ವಿನೋದಿಸುವ
ನಮ್ಮ ನಾರಾಯಣಗೂ ರಮ್ಮೆಗೂ ಅಡಿಗಡಿಗೆ
ಅಸುರ್ರ ಮೋಹನವೇ ನರನಟನೆ ೧೧೧

ಮದುವೆ ಮನೆಯಲ್ಲಿ ಈ ಪದನ ಪಾಡಿದರೆ
ಮದು ಮಕ್ಕಳಿಗೆ ಮುದವಹುದು
ಮದುವಳಿಗೆ ವಾಲೆ ಭಾಗ್ಯ ದಿನದಿನಕೆ ಹೆಚ್ಚುವುದು
ಮದನನೈಯನ ಕೃಪೆಯಿಂದ - ಶೋಭಾನೆ ೧೧೨

ಶೋಭನವೆನ್ನಿರೆ ಸುರರೊಳು ಸುಭಗನಿಗೆ
ಶೋಭನವೆನ್ನಿ ಸುಗುಣನಿಗೆ
ಶೋಭನವೆನ್ನಿರಿ ತ್ರಿವಿಕ್ರಮ ರಾಯಗೆ
ಶೋಭನವೆನ್ನಿ ಸುರಪ್ರಿಯಗೆ ೧೧೩

ಶ್ರೀಮದ್ವಾದಿರಾಜಗುರ್ವಂತರ್ಗತ ಶ್ರೀ ಹಯವದನ ಪ್ರಿಯತಾಂ

ಶ್ರೀ ಲಕ್ಷ್ಮೀಶೋಭನ ಪದ ಸಂಪೂರ್ಣಂ

ಶ್ರೀ ಕೃಷ್ಣಾರ್ಪಣಮಸ್ತು

## ೮೬ ಸುಳಾದಿ

ತಾಳ

ಹರಿಪದವ ನೆನೆವಂಗೆ ನರಕದ ಭಯವಿಲ್ಲ
ಹರಿಪದವ ನೆನೆವಂಗೆ ಮಾಯೆಯ ಭಯವಿಲ್ಲ
ಹರಿಪದವ ನೆನೆವಂಗೆ ವಿಷದ ಭಯವಿಲ್ಲ
ಹರಿಪದವ ನೆನೆವಂಗೆ ಅರಿಗಳ ಭಯವಿಲ್ಲ
ಹರಿಪದವ ನೆನೆವಂಗೆ ಭವದ ಭಯವಿಲ್ಲ
ಹರಿಪದವ ನೆನೆವಂಗೆ ಜನನದ ಭಯವಿಲ್ಲ
ಹರಿಪದವ ನೆನೆವಂಗೆ ಮರಣದ ಭಯವಿಲ್ಲ
ಬರಿಯ ಮಾತ್ರೇ ಅಲ್ಲ ಅಕುತೋಭಯನೆಂದು
ವರದ ಹಯವದನನ ಪದ ಪದುಮವ ನಂಬು ೧

ತಾಳ

ಧ್ರುವನ ನೋಡು ಸುರಲೋಕದಿ
ಭೂಪ ವಿಭೀಷಣನ್ನ ನೋಡಿರೊ
ಅವನಿಯ ಕೆಳಗೆ ಬಲಿಯ ಉತ್ಸಾಹವ ನೋಡಿ ಮನುಜರೆಲ್ಲರು
ಭುವನ ತೃತೀಯದವರೆ ಸಾಕ್ಷಿ ಹಯವದನನ ಭಜಕರಿಗೆ ೨

ತಾಳ

ಹತ್ತಾವತಾರದಿ ಭಕ್ತರ ಭಯಗಳ
ಕಿತ್ತು ಭೃತ್ಯರ ಕಾಯ್ವ ಕಥೆಯ ಕೇಳ್ವರು
ಮತ್ತೆ ಮೃತ್ಯುಗಳ ಭೀತನೆಂಬುವುದ್ಯಾಕೆ
ಹೆತ್ತ ತಾಯಿಯಿಂದ ತತ್ವವ ಕೇಳ್ವೆಯ
ಕರ್ತೃ ಹಯವದನನೆ ಭಕ್ತರ ಭಯಕ್ಕೆ
ಕತ್ತಲೆ ಗಿನನಂತೆ ಹತ್ತು ಎಂಬುದ ನಂಬು ೩

ತಾಳ

ಕರಿಯ ಕಾಯ್ದವನ ಪಾದವ ನಂಬು
ಉರಿಯ ನುಂಗಿದವನ ಪಾದವ ನಂಬು
ಪುರಹರ ಗಾದನ್ನ ಪಾದವ ನಂಬು
ಸಿರಿ ಹಯವದನನೆ ಭಕ್ತರ ಭಯ ಸಂ
ಹರಣ ನೆಂಬುದಕಿನ್ನು ಸಂಶಯವಿಲ್ಲ ೪

ತಾಳ

ದ್ರೌಪದಿಯ ಭಯ ಪರಿಹರಿಸಿದವನಾರೈ
ಆ ಪರೀಕ್ಷಿತನ ಭವ ಭಂಜನನಾರೈ
ತಾಪಸರಿಗಸುರರಿಂದ ಬಂದ ಪರಿಪರಿಯ
ಆಪತ್ತುಗಳನೆಲ್ಲ ಖಂಡಿಸಿದನಾರೈ
ಶ್ರೀಪತಿ ಹಯವದನನೊಬ್ಬನೆ ತನ್ನವರ
ತಾಪತ್ರಯವ ಬಿಡಿಸಿ ತಕ್ಕೈಸಿಕೊಂಬ ೫

ತಾಳ

ವಿಷನಿಧಿಯನೊಂದು ಧಾಟಿ
ವ್ಯಸನಗಳನೆಲ್ಲ ಖಂಡಿಸಿ
ಬಿಸಜ ವನಿತೆಯ ಕಂಡು ಬಂದ
ಅಸಮ ಹನುಮನ ನೋಡ್ಯೆಯ
ಕುಸುಮವನು ತರಪೋಗಿ
ಅಸುರರ ಕುಸುರಿದರಿದುದ ನೋಡ್ಯೆಯ
ಬಿಸಜಾಕ್ಷ ಹಯವದನ ತನ್ನ
ಹೆಸರುಗೊಂಡರೆ ಭಕ್ತರ
ವಶದಲ್ಲಿಪ್ಪುದು ಪಾರ್ಥನ
ಯಶವ ಪಸರಿಸಿದ ಅಚ್ಯುತ ೬

ತಾಳ

ಪೂರ್ವಕಾಲದಿ ತೀರದ ಕಥೆಗಳ ನಿ
ವಾರಿಗಿ ಜರಿದುದ ನರರೆಲ್ಲ ಕಾಣರೆ
ಶರೀರ ವೆರಸಿದವರಿಗೆ ಸ್ವರ್ಗ ಗತಿಯುಂಟೆ
ಕರುಣಾಕರ ಕೃಷ್ಣನ ಕಂಡವರಿಗೆ ಭಯವುಂಟೆ
ಈರೇಳು ಲೋಕದೊಳಗೆ ಈ ಹಯವದನನಂತೆ
ಶರಣಾಗತ ಜನರ ಸಲಹುವರುಳ್ಳರೆ ೭

ಜೊತೆ

ಸುರಾಸುರ ಚಕ್ರವರ್ತಿ ಅಸುರಮದ ಭೇದನ್ನ
ಸಿರಿ ಹಯವದನನ್ನ ಚರಣವೆ ಗತಿಯೆನ್ನ

೫೭ ರಾಗ ಶಂಕರಾಭರಣ ಏಕತಾಳ

ನೆನೆವೆನನುದಿನ ನೀಲನೀರದ
ವರ್ಣನ-ಗುಣರನ್ನನ ಪ.
ಮುನಿಜನ ಪ್ರಿಯ ಮುದ್ದು ಉಡುಪಿನ
ರಂಗನ-ದಯಾಪಾಂಗನ ಅ.

ದೇವಕೀ ಜಠರೋದಯಾಂಬುಧಿ
ಚಂದ್ರನ-ಗುಣಸಾಂದ್ರನ
ಗೋವ್ರಜಕೆ ಘನ ಯಮುನೆದಾಟಿ
ಬಂದನ-ಅಲ್ಲಿ ನಿಂದನ
ಮಾವ ಕಳುಹಿದ ಮಾಯಾ ಶಟವಿಯ
ಕೊಂದನ-ಚಿದಾನಂದನ
ದೇವರಿಪು ದೈತ್ಯೇಂದ್ರ ಶಕಟನ
ಒದ್ದನ-ಶ್ರುತಿ ಸಿದ್ಧನ ೧

ಗೋಕುಲದ ಗೋಪಿಯರ ವಂಚಕ
ಚೋರನ-ಬಹು ಧೀರನ
ಅನೇಕ ನಾರಿಯರ್ವಸನವನು ಕ
ದ್ದೊಯ್ದನ - ತುರುಗಾಯ್ದನ
ನಾಕಿಯರಿಗರಿಧೇನುಕ ವತ್ಸ ವಿ
ಘಾತನ- ವಿಖ್ಯಾತನ
ಕಾಕುಮತಿ ಕಾಳಿಂಗನ ಫಣ
ತುಳಿದನ-ಅವಗೊಲಿದನ ೨

ಶೈಲವನು ಅಹಿಶಯನ ಬೆರಳಲಿ
ಆಂತನ-ಬಲವಂತನ
ಸೋಳ ಸಾಸಿರ ಬಾಲೆಯರ ಕರ
ಪಿಡಿದನ-ಸುಧೆ ಗುಡಿದನ
ಬಾಲೆ ಭಾಮೆಯರೊಡನೆ ಜಲಕ್ರೀಡೆ
ಗಿಳಿದನ-ಅಲ್ಲಿ ನಲಿದನ
ಲೀಲೆಯಲಿ ಲಲನೆಯರಿಗಿಷ್ಟವ
ಕೊಟ್ಟನ-ಸಂತುಷ್ಟನ ೩

ಕ್ರೂರ ಬಕ ಕೇಶಿಗಳನೆಲ್ಲರ
ಸೀಳ್ದನ-ಸುರರಾಳ್ದನ
ಅ- ಕ್ರೂರ ಕರೆಯಲು ಹರುಷದಿಂದಲಿ
ಬಂದನ-ಸುರವಂದ್ಯನ
ನಾರಿ ಕುಬುಜೆಗೆ ಭೂರಿ ಸಂತಸ
ವಿತ್ತನ-ಅತಿಶಕ್ತನ
ವಾರಣವನು ಕೆಡಹಿದಪ್ರತಿ
ಮಲ್ಲನ-ಅತಿಚೆಲ್ವನ ೪

ಸುಲಭದಿಂದಲಿ ಶಿವನ ಧನುವನು
ಮುರಿದನ-ನೆರೆ ಮೆರೆದನ

ಮಲೆತ ಮಲ್ಲರ ಕೆಡಹಿ ರಂಗದಿ
ನಿಂತನ-ಜಯವಂತನ
ಖಳಕುಲಾಗ್ರಣಿ ಕಂಸನೆಂಬನ
ಹೊಡೆದನ-ಹುಡಿಗೆಡೆದನ
ಬಲದಿ ತಾಯಿತಂದೆ ಬಂಧನ
ಕಡಿದನ-ಯಶಪಡೆದನ ೨

ಭುವನ ಪಟ್ಟವನುಗ್ರ ಸೇನಗೆ
ಕೊಟ್ಟನ-ಅತಿಶ್ರೇಷ್ಠನ
ಯುವತಿಯರಿಗುದ್ಧವನ ಕಳುಹಿದ
ಜಾಣನ-ಸುಪ್ರವೀಣನ
ವಿವಿಧ ವಿದ್ಯಾ ಕಲೆಗಳೆಲ್ಲವ
ನರಿತನ-ಶುಭ ಚರಿತನ
ಜವನ ಶಿಕ್ಷಿಸಿ ದ್ವಿಜನ ಕಂದನ
ತಂದನ-ಆನಂದನ ೩

ಕುಮತಿಖಳ ಮಾಗಧನ ಯುದ್ಧದಿ
ಗೆದ್ದನ-ಅನವದ್ಯನ
ದ್ಯುಮಣಿ ಸಮುದ್ವಾರಕಿಯ ರಚಿಸಿದು
ದಾರನ-ಗಂಭೀರನ
ಸುಮತಿ ಮುಚುಕುಂದನೊದ್ದ ಯವನನ
ಸುಟ್ಟನ-ಅತಿಧಿಟ್ಟನ
ವಿಮಲ ಸುಚರಿತ್ರಾಷ್ಟ ಮಹಿಷಿಯ
ರಾಳ್ದನ-ನೆರೆಬಾಳ್ದನ ೪

ಮುರನರಕ ಮುಖ್ಯರನು ಚಕ್ರದಿ
ತರಿದನ-ಕರಿವರದನ
ಸುರತರುವ ಸತಿಗಾಗಿ ತಂದ ಸ
ಮರ್ಥನ-ಜಗತ್ಕರ್ತನ ೮

ದುರುಳ ಶಿಶುಪಾಲಾದಿ ದೈತ್ಯ ಸಂ
ಹಾರನ-ಬಹುಶೂರನ
ಕುರುಕುಲಕೆ ಲಯವಿತ್ತ ಪಾಂಡವ
ಪ್ರಿಯನ-ಕಪಿಗೇಯನ ೮

ಇಂತು ಇಳೆಯ ಸುಜನರ ಸಲಹುವ
ಕಾಂತನ-ಸಿರಿವಂತನ
ಪಂಥವುಳ್ಳ ಪ್ರಸನ್ನ ಹಯವ
ದನ್ನನ-ಮುನಿಮಾನ್ಯನ
ಸಂತತವೀ ಸಾರಕಥೆಯನು
ಕೇಳ್ವರ-ನೆರೆಬಾಳ್ವರ
ಕಂತುಪಿತ ಕಾರುಣ್ಯದಿಂದಲಿ
ಪೊರೆವನು-ಸುಖಗರೆವನು ೯

೫೮ ರಾಗ ಶಂಕರಾಭರಣ ಏಕತಾಳ

ಕಂಡೆ ಕಂಡೆನು ಕೃಷ್ಣ ನಿನ್ನಯ ದಿವ್ಯ ಮಂಗಳ ಮೂರ್ತಿಯ
ಕಂಡು ಬದುಕಿದೆ ಇಂದು ನಾನು ಕರುಣಿಸೊ ಎನ್ನೊಡೆಯನೆ ಪ.

ಉಟ್ಟದಟ್ಟಿಯು ಪಿಡಿದ ವಂಕಿಯು
ತೊಟ್ಟ ಕೌಸ್ತುಭ ಭೂಷಣ
ಮೆಟ್ಟಿದ ನವರತ್ನದ್ಹಾವಿಗೆ
ಇಟ್ಟ ಕಸ್ತೂರಿ ತಿಲಕವು ೧

ಮಂದಹಾಸವು ದಂತಪಙ್ಕ್ತಿಯು
ಚೆಲುವ ಕಡೆಗಣ್ಣ ನೋಟವು
ಅಂದವಾದ ಕುರುಳು ಕೂದಲು
ಮುದ್ದು ಸುರಿಯುವ ಮುಖವನಾ ೨

ನೊಲ್ಲೆ ಮಲ್ಲಿಗೆ ದಂಡೆ ಕೊರಳಲಿ
ಚೆಲ್ವ ಕಂಕಣ ಕೈಯಲಿ
ಗೊಲ್ಲ ಸತಿಯರ ಕುಚಗಳಲ್ಲಿ
ಝುಲ್ಲು ಝುಲ್ಲೆಂದು ನಲಿವನ ೩

ಸುರರು ಪುಷ್ಪದ ವೃಷ್ಟಿ ಕರೆಯಲು
ಅಸುರರೆಲ್ಲರು ಓಡಲು
ಕ್ರೂರ ಕಾಳಿಯ ಫಣಗಳಲ್ಲಿ
ಧೀರ ನಲಿನಲಿದಾಡಲು ೪

ಇನ್ನು ಎನ್ನ ಬಂಧ ತೀರಿತು
ಇನ್ನು ಕ್ಲೇಶವು ಹೋಯಿತು
ಇನ್ನು ಅನ್ಯರ ಭಜಿಸಲ್ಯಾಕೆ
ಮನ್ನಿಸೋ *ಹಯವದನನೆ ೫

೨೪೯ ರಾಗ ಮುಖಾರಿ ಆದಿತಾಳ

ಏನ ಹೇಳಲಿ ನರಹರಿ ನಿನ್ನ ಮಹಿಮೆಯ ನಿಸ್ಸ ಪ.

ಧ್ಯಾನ ಮಾಡೆನೆಂದರೆ ನಿಲ್ಲಗೊಡದು ಮನ ಅ.

ಸಚ್ಚಿದಾನಂದನ ಪಾದಾರವಿಂದವ
ಮೆಚ್ಚಿ ಮೌನವಾಗಿ ಇರು ಎಂದರೆ
ಹುಚ್ಚೆದ್ದ ಕಪಿಯಂತೆ ವಿಷಯವೆಂಬಡವಿಲಿ
ಕಿಚ್ಚು ಕಂಗೊಂಡು ಎನ್ನ ಕಾಡುತಿದೆ ೧

ವಾಸುದೇವನ ಗುಣಗಳ ಸ್ತುತಿಸದೆ ದು
ರಾಸೆಯೊಳು ಬಿದ್ದು ಕಾಡುತಿದೆ
ಲೇಸಾಗಿ ನಾಯಿ ಬಾಲಕೆ ನಾರಾಯಣ ತೈಲ
ಏಸು ಬಾರಿ ತೀಡಿದರೆ ನೀಟಾಗುವುದೊ ೨

---

*ಗೋಪೀನಾಥನೆ, ಪಾಠಾಂತರ.

ಸಾಧು ಸಜ್ಜನರ ಸಂಗವ ಮಾಡಲೊಲ್ಲದೆ
ಬಾಧಿಸುತಿದೆ ದುಷ್ಟ ಸಂಗವಿಂದ
ಮಾಧವ ಭಕ್ತವತ್ಸಲ ಹಯವದನನೆ
ನೀ ದಯಮಾಡಿ ನಿನ್ನಂತೆ ಮಾಡೆನ್ನನು ೫

೬೦ ರಾಗ ಕಲ್ಯಾಣಿ ತಾಳ

ಕಂಜಾಕ್ಷ ಕಾಯಯ್ಯ ಕರುಣಾನಿಧಿಯೆ - ಬಲ
ಭಂಜನನನುಜನೆ ನೋಡೆನ್ನ ಪ.

ಅಂಜದೆ ನಾ ನಿನ್ನ ಅಡಿಗಳಿಗೆರಗುವೆ
ಕುಂಜರ ವರದನೆ ಕೂಡೆನ್ನ ಅ.

ನೀನೊಲಿದಾಗಲೆ ನಿಖಿಳ ಸಂಪದ ತನ್ನಿಂ
ತಾನೆ ಬಾಹುದು ತಡವಿಲ್ಲ
ಆ ನಳಿನಭವಾದ್ಯಮರರಿದಕೆ ಸಾಕ್ಷಿ
ಭಾನುಸನ್ನಿಭ ಬಾರೊ ನಲ್ಲ ೧

ಪುಂಡರೀಕಾಕ್ಷನ ಪೂಜಿಪ ಭಕ್ತರ
ಮಂಡೆಯು ಪೂವು ಬಾಡದೆಂದು
ಕಂಡೆ ನಾ ರಣದಲ್ಲಿ ಕಲಪಾರ್ಥನಿಗೊಲಿದು
ಬಂಡಿಯ ಬೋವನೀನಾದಂದು ೨

ವೃಂದಾರಕೇಂದ್ರ ಶ್ರೀ ಹಯವದನ ಮುಕುಂದ
ಮಂದರೋದ್ಧಾರ ಮತ್ತೊಂದರಿಯೆ
ಇಂದಿರೆಯುರಸ ಬಾ ಇಂದುವದನ ದೀನ
ಬಂಧುವೆ ಬಾ ಭಕ್ತರ ಸಿರಿಯೆ ೩

## ೬೧ ರಾಗ ಶಂಕರಾಭರಣ ಏಕತಾಳ

ಕೊಲ್ಲು ಬೇಗ ಕಳ್ಳರ ಶ್ರೀ ನಲ್ಲ ಮಧ್ವ ವಲ್ಲಭ ಪ.

ಕೊಲ್ಲದಿದ್ದರೆ ನಿಲ್ಲರವರು ಕಲಿಯುಗದ ಕಳ್ಳರು ಅ.

ಎಲ್ಲ ಕೂಡಿ ನಿನ್ನ ಪೂಜೆಗೆ ಕಲ್ಲು ಹಾಕುತಿದ್ದರು
ಬಲ್ಲೆನವರ ಕೊಳ್ಳೆಗಾರರ ಹಲ್ಲು ಕೀಳದೆ ನಿಲ್ಲರು ೧

ಒಳ್ಳೆ ಮಾತನಾಡಲವರು ಕೋಲಾಹಲದಿ ಬೈವರು
ಗೆಲ್ವ ಶಕ್ತಿಯಿಲ್ಲ ನಮಗೆ ಬಲ್ಲೆ ಮಧ್ವರಿಗೊಲಿದನೆ ೨

ಕಳ್ಳತನವ ನೊಲ್ಲೆವೆಂಬರು ಮುಳ್ಳು ಮೊನೆಯಂತಿಪ್ಪರು
ಚೆಲ್ವ ಹಯವದನನವರ ಕೊಲ್ಲು ನಮ್ಮನು ಗೆಲ್ಲಿಸು ೩

## ೬೨ ರಾಗ ಮೋಹನ ಝಂಪೆತಾಳ

ನಿನ್ನ ದಾಸರ ದಾಸನೆಂತಾಹೆನ್ಯೆ ಕೃಷ್ಣ
ಅನ್ನಂತ (ಅನಂತ) ಅಪರಾಧ ಆಕರಾದವನು ಪ.

ಅರುಣೋದಯವ ಜರಿದು ವಿಹಿತ ಕರ್ಮವ ತೊರೆದು
ಪೊರೆವ ನಿನ್ನಂಘ್ರಿ ಮರೆದು
ಧರೆಗೆಲ್ಲ ಬಾಯ್ದೆರೆದು ದೈನ್ಯದಲಿ ಹಲ್ಕಿರಿದು
ಮರ್ಯಾದೆ ಗೆಟ್ಟು ತಿರಿದು
ಇರುಳು ಹಗಲೆನ್ನದೆ ಈ ವಿಧದಿ ಹೊಟ್ಟೆಯನು
ಪೊರೆದು ಇದು ಪಾಪವೆಂದರಿದು ಅರಿಯದವ ೧

ಜಟ್ಟಿಗಳ ಮನೆಯ ನಾಯಂತೆ ಒಳಹೊರಗೆ ನಾ
ಕೊಟ್ಟವರ ಹಿಂದೆ ತಿರುಗಿ

ಅಟ್ಟುಂಡು ಬಾಳಿ ಬದುಕಿಗ ತಮ್ಮ ಹಿರಿಯರು
ಕೆಟ್ಟು ಮುರಿದುದನು ಅರುಹಿ
ಉಟ್ಟ ಅರಿವೆಯು ತೋರಿ ಹೊಟ್ಟೆ ಬಾಯನೆ ತೋರಿ
ಕೊಟ್ಟುದಕೆ ತುಷ್ಟನಾಗದೆ ಆವರ ಜೈವವನು ೨

ವೃತ್ತಿಯಿಲ್ಲದೆ ನೀಚವೃತ್ತಿಗಳನನುಸರಿಸಿ
ಅ - ಕೃತ್ಯ ಶತಗಳನು ಮಾಡಿ
ಸತ್ಯ ಶೌಚವ ಬಿಟ್ಟು ಶ್ರವಣ ಮನನದ ಪ್ರ
ಸಕ್ತಿಗಳ ಹೋಗಲಾಡಿ
ಉತ್ತಮರು ತಾಯ್ತಂದೆ ಗುರುಹಿರಿಯರುಗಳ
ಆರ್ಥಗಳ ಪರಿಹರಿಸಿ ಆವರ ನಿಂದಿಸುವವನು ೩

ಪರ್ವ ಉಪರಾಗ ದ್ವಾದಶಿ ಅಯನಗಳಲ್ಲ
ಸರ್ವ ವಿಹಿತಗಳ ವಿರಾರಿ
ಉರ್ವಿಯೊಳಗಣ ಯೋಗ್ಯರೆಲ್ಲರನು ಹಳಿದೆನ್ನ
ನಿರ್ವಾಹಗಳನೆ ತೋರಿ
ದುರ್ವಿಚಾರದಿ ಸ್ವಲ್ಪ ಧನಕಾಗಿ ಎನ್ನೊಳಿಹ
ಪೂರ್ವ ಸಂಚಿತ ಮಂತ್ರ ತುಚ್ಛರಿಗೆ ಮಾರಿದವ ೪

ಛಲ ಚಾಡಿ ಡಂಭ ಮಿಥ್ಯಾಜ್ಞಾನ ದುರ್ವಿಷಯ
ಕುಲಸತಿಯು ಕೂಡೆ ಜಗಳ
ಕಳವು ಕಠಿಣೋಕ್ತಿ ದುಷ್ಟಾನ್ನ ಭೋಜನ ಮದುವೆ
ಗಳ ಮುರಿವ ಪಾಪ ಬಹಳ
ಹಳಿವೆ ಹರಿದಾಸರ ವ್ರತಭಂಗ ನಾನಾಗಿ
ಸುಲಭ ಹಯವದನನ್ನ ಮರೆತ್ತಾಳು ಹರಟೆಯುವ ೫

---

೬೩ ರಾಗ ಭೈರವಿ ಝಾಪುತಾಳ

ಜಯಮಂಗಳಂ ನಿತ್ಯ ಶುಭಮಂಗಳಂ ಪ.

ವಸುದೇವ ತನಯನಿಗೆ ವೈಕುಂಠ ನಿಲಯನಿಗೆ
ಕುಸುಮ ನಾಭನಿಗೆ ಕೋಮಲ ರೂಪಗೆ
ಯಶೋದೆಯ ನಂದನಿಗೆ ವಸುಧೆಯ ರಮಣನಿಗೆ
ನಸುನಗೆಯೊಳೊಪ್ಪುವ ನರಸಿಂಹಗೆ ೧

ಕನಕ ಕಿರೀಟನಿಗೆ ಕಸ್ತೂರಿ ತಿಲಕನಿಗೆ
ಕನಕ ಕುಂಡಲಗೆ ಕೌಸ್ತುಭ ಹಾರಗೆ
ಕನಕಾಂಬರಧರಗೆ ಕಾರುಣ್ಯ ರೂಪನಿಗೆ
ಸನಕಾದಿ ಮುನಿವಂದ್ಯ ನರಸಿಂಹಗೆ ೨

ಪಂಕಜನಾಭನಿಗೆ ಪಾಂಚಾಲಿ ರಕ್ಷಕಗೆ
ಲಂಕೆಯನು ವಿಭೀಷಣನಿಗಿತ್ತವಗೆ
ಕುಂಕುಮಾಂಕಿತನಿಗೆ ಕುವಲಯ ನೇತ್ರನಿಗೆ
ಬಿಂಕದಿಂದಲಿ ಮೆರೆವ ನರಸಿಂಹಗೆ ೩

ಪಕ್ಷಿವಾಹನನಿಗೆ ಪರಮ ಪಾವನನಿಗೆ
ಕುಕ್ಷಿಯೊಳು ಜಗವ ನಿಂಬಿಟ್ಟವನಿಗೆ
ಲಕ್ಷ್ಮೀ ಕಾಂತನಿಗೆ ಲಕ್ಷಣವಂತನಿಗೆ
ಅಕ್ಷಯಾಶ್ರಿತ ಲಕ್ಷ್ಮಿ ನರಸಿಂಹಗೆ ೪

ಭಕ್ತ ವತ್ಸಲನಿಗೆ ಭವದುಃಖ ದೂರನಿಗೆ
ಮುಕ್ತಿದಾಯಕಗೆ ಚಿನ್ಮಯ ರೂಪಗೆ
ಮಿತ್ರ ರುಗ್ಮಿಣಿ ಸತ್ಯಭಾಮೆಯ ರರಸನಿಗೆ
ನಿತ್ಯ ಕಲ್ಯಾಣ ಶ್ರೀ ಹಯವದನಗೆ ೫

ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯರ್ಾದ್ಯನೇಕ
ಬಿರುದಾಂಕಿತರಾದ, ಉಡುಪಿ - ಸೋದೇಮಠದ ಶ್ರೀಮದ್ವಾದಿರಾಜ
ಪೂಜ್ಯಚರಣರಿಂದ ವಿರಚಿತವಾದ

# ಶ್ರೀ ವೈಕುಂಠವರ್ಣನೆಯು

**ಶ್ರೀಗುರುಭ್ಯೋನಮಃ, ಶ್ರೀವೇದವ್ಯಾಸಾಯನಮಃ.**

ಹರಿಃ ಓಂ.

ಭಾಮಿನಿಷಟ್ಪದಿ:—

ತತ್ವಸಾರದ ಸೊಗಗು ಧರೆಯೊಳು
ವಿಸ್ತರಿಸಬೇಕೆಂದು ಮುನಿಕುಲ
ರತ್ನ ಶ್ರೀಗುರು ವಾದಿರಾಜನು ಶ್ರುತಿ ಪುರಾಣಗಳ
ವೊತ್ತವನು ನೆರೆ ಮಥಿಸಿ ಮೇಲಣಾ
ಮುಕ್ತಿ ಸೃಷ್ಟಿ ಸ್ಥಿತಿಲಯಂಗಳ
ಅರ್ಥಯಿಂದಲಿ ಬಣ್ಣಿಸಿದ ಕಥೆ ಕೇಳಿ ಸಜ್ಜನರು

ರಾಗ ನಾಟಿ ರೂಪಕತಾಳ

ಇದು ಪುಣ್ಯಕಥೆ ಲೋಕಕ್ಕಿದೆ ಮುಕುತಿಯ ಪಥ
ಇದ ಕೇಳುವವನೆ ಕೃತಾರ್ಥ
ಇದು ಸರ್ವಸಾಧನ ವಿಧುಗಳಿಗೆ ಸಮ್ಮತ
ಮುದವ ನೀವುದು ಕೇಳ್ವ ಜನಕೆ ೧

ಮೇಲೆನಿಪ ನಾಟಿ ಮೊದಲಾದ ರಾಗಂಗಳ
ತಾಳ ಮೇಳದಿ ನಾಲ್ಕು ಸಂಧಿ

ಶ್ರೀಲೋಲನ ಚರಿತೆ ತತ್ವರಹಸ್ಯವು
ಮೇಲೆ ಕೇಳ್ವರಿಗಲಂಕಾರ ೨

ಕನ್ನಡಿಯೊಲಿಪ್ಪಂಥ ಪೂರ್ಣ ಪ್ರಜ್ಞರ ಮತ
ದುನ್ನತ ತತ್ವ ಸಾರವನು
ಕನ್ನಡದಿ ಬಣ್ಣಿಸಿದ ವಾದಿರಾಜ ಮುನಿಯು
ಬಿನ್ನಪವನೆಲ್ಲರು ಮನ್ನಿಪುದು ೩

ಶ್ಲೋಕ:—

ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ
ಪ್ರಸನ್ನ ವದನಂಧ್ಯಾಯೇತ್ಸರ್ವವಿಘ್ನೋಪಶಾಂತಯೇ

ಪದ

ನಿಷ್ಕಳಂಕ ಚಂದ್ರವದನ ಶುಕ್ಲವಸನ
ಲಕ್ಷ್ಮೀ ಶಶಿವರ್ಣ ಪ್ರಸನ್ನ
ನಾಲ್ಕು ತೋಳಿನ ವಿಷ್ಣು ನಮ್ಮ ವಿಘ್ನಂಗಳ
ಶಿಕ್ಷಿಸಿ ರಕ್ಷಿಸಬೇಕು ೪

ಶ್ಲೋಕ:—

ನಾರಾಯಣಂ ನಮಸ್ಕೃತ್ಯ ನರಂಚೈವ ನರೋತ್ತಮಂ
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್

ಪದ ಧ್ರುವತಾಳ

ನರನೆಂದು ಶೇಷನ ಪೆಸರು ನಾರಾಯಣನ
ಮೆರೆವ ಮೂಲರೂಪವೆನಿಪ
ಗುರು ವ್ಯಾಸ ನರೋತ್ತಮ ವಾಯು ದೇವ ಲಕುಮಿ
ಸರಸ್ವತಿ ಗ್ರಂಥದೊಡತಿಗಡ ೫

ಗ್ರಂಥ ಮಾಡಿದ ವೇದವ್ಯಾಸ ಮುನೀಂದ್ರನ್ನ
ವೃಂದಾರಕ ಗುರುವೆಂದೊಂದಿಸಿತು
ಇಂದಿರೇಶನೆಂಬ ಮೂಲ ನಾರಾಯಣನ
ಚೆಂದುಳ್ಳ ಪೆಸರೆಂದೊಂದಿಸಿತು ೭

ವಾಣಿಯ ಬಲಗೊಂಬೆ ಪ್ರಾಣನಾಥನ ಪಾದ
ಕ್ಕಾನೆರಗುವೆ ರಮೆಯಡಿಗೆ
ಆ ನಮಿಸುವೆ ಹಯವದನ ದೇವೋತ್ತಮನ
ಮಾನಸದಲ್ಲಿಟ್ಟು ನೆನೆವೆ ೮

ಶ್ಲೋಕ:—

ಲಕ್ಷ್ಮೀನಾರಾಯಣಂ ವಂದೇ ತದ್ಭಕ್ತ ಪ್ರವರೋಹಿ ಯಃ
ಶ್ರೀ ಮದಾನಂದತೀರ್ಥಾಖ್ಯೋ ಗುರುಸ್ತಂಚ ನಮಾಮ್ಯಹಂ
ಏತಾವತಾಲಂ ನನು ಸೂಚಿತೇನ
ಗುಣೈರಸಾಮ್ಯೇನಾತಿ ಶಾಯನೇಸ್ಯಾತ್
ಹಿತ್ವೇತರಾನ್ ಪ್ರಾರ್ಥಯತೋ ವಿಭೂತಿ
ರ್ಯಸ್ಯಾಂಘ್ರಿ ರೇಣುಂ ಜುಷುತೇನ ಭೀಪ್ಸೋಃ

೧ ನಾದನಾಮಕ್ರಿಯ ರೂಪಕತಾಳ

ಮಿಕ್ಕ ದೇವರ್ಕಳ ಲೆಕ್ಕಿಸದೆ ಲಕುಮಿ ಮನ
ಉಕ್ಕಿ ಆತಗೆ ಮಾಲೆ ಯಿಕ್ಕಿದಳು
ಅಕ್ಕರೆಯಿಂದಲಿ ಲಕುಮಿ ನರೇಯಣರ್ಗೆರಗಿ ತ
ದ್ಭಕ್ತ ಮಧ್ವಮುನಿಗೆ ಶರಣೆಂಬೆ ೯

ಶ್ರುತಿ:—

ತೃತೀಯ ಮಸ್ಯ ವೃಷಭಸ್ಯ ದೋಹಸೇ
ದಶಪ್ರಮತಿಂ ಜನಯಂತ ಯೋಷಣಃ

ಯದೀ ಮನುಪ್ರದಿವ್ರೋ ಮಧ್ವ ಆದವೇ
ಗುಹಾನಂತಂ ಮಾತರಿಶ್ವಾ ಮಥಾಯುತಿ

ಪದ ಅಟತಾಳ

ಸಿರಿಭೂಮಿ ದುರ್ಗಿಯರು ಜ್ಞಾನಾವೃತವ ಕರೆವರೆ
ಗುರು ಪೂರ್ಣಪ್ರಜ್ಞರ ಪುಟ್ಟಿಸಿದರು ಗಡ
ನರಲೋಕದ ನಾಂಗೆ ಇವರ ಹೆರುವ ಭಾಗ್ಯ
ದೊರಕದೆಂದು ಶ್ರುತಿಯೋಷಿಣ ಯೆಂದಿತು ॥

ಆದಿತಾಳ

ದಶಮತಿಯೆಂಬ ಪೆಸರೆಮ್ಮ ಗುರುವರನಿಗೆ
ದಶ ದಿಶಗಳಲ್ಲಿ ಪ್ರಸಿದ್ಧ ಕಾಣಿರೊ
ಎಸೆವ ಈ ನಾಮ ವನಿಮಿಷರಿ ಗೊಬ್ಬರಿಗಿಲ್ಲ
ಋಷಿಗಿಲ್ಲ ಮಾನಿಸರೊಳಿಲ್ಲ
ಇದು ನಮ್ಮ ಫಲ ಬಲವಿಂದೆಮ್ಮ ಗುರುವಿಗಾದುದಮ್ಮಾ ೧೦

ಪೂರ್ಣಪ್ರಜ್ಞನೆಂಬ ನಾಮ ನಮ್ಮ ಗುರುವರಗುಂಟು
ಉನ್ನತೋಪನಿಷತ್ತು ಸರ್ವವೆಂಬ ಶಬ್ದಕ್ಕೆ
ಪೂರ್ಣನೆಂಬರ್ಥವ ಪೇಳಿತಾಗಿ ದಶಮತಿಯೆಂಬು
ದನ್ಯನ ಪೇಳುವುದೆ ಮಧ್ವಮುನಿಗಲ್ಲದೆ
ಇನ್ನು ಉತ್ತರೋತ್ತರವಲ್ಲದೆ ಪೂರ್ವೋಕ್ತಿ ಪೇಳ್ವುದೆ ೧೧

ಇದು ದೇವರೊಳು ವೃಷಭನಾದ ವಾಯುದೇವರ
ಸಾಧುಗುಣವುಳ್ಳ ತೃತೀಯ ರೂಪಗಡ
ಬುಧರಿಗೆ ಬೋಧವಿತ್ತು ತುದಿಯಲ್ಲಿ ಮುಕುತಿ ಸಂ
ಪದವೀವ ಈ ಗುರುವಿಗಿದಿರಾರವ ೧೨

ಇದಿರಾದ ಪ್ರಥುಗೆ ಕ್ಷಯವನಿತ್ತ
ಕದನ ಕರ್ಕಶ ಭೀಮ ದ್ವಿತೀಯಾವತಾರಗಡ
ತುದಿಯ ರೂಪವಿದೆಂದು ಶ್ರುತಿ ಪೇಳಿತು
ದುರ್ಮತವ ಪಳಿಯಿತು ಕುಮತಿಯ ಹಳಿಯಿತು ೧೨

ಆದಿತಾಳ

ಸಂತರ್ಮಕ್ಷ್ಕೆ 'ವಿದ್ವಾನ್ಮಧ್ವ ಉಜ್ಜಹಾರ' ವೆಂಬ ವೇದ
ಸಂತೋಷದಿ ನಮ್ಮ ಗುರುವ ಕೊಂಡಾಡಿತು
ಇಂತು ಸುಪ್ರಸಿದ್ಧ ಶ್ರುತಿ ತುತಿಸಿದ ಮಧ್ವಮುನಿ
ಎಂಥಾ ಗುರುವಾದವ ನೀವೆಲ್ಲ ನೋಡಿರೊ
ಈ ಮತವ ಪಿಡಿಯಿರೊ ಕುಮತವ ಹಳಿಯಿರೊ
ಇವರುಕ್ತಿ ಗೊಡಂಬಡಿರೊ ೧೪

ಮಧ್ವಯೆಂಬ ಈ ವಾಯುವೆ ಹೃದ್ಗುಹಾದೊಳಿದ್ದ ಎಲ್ಲಾ
ರಾಳ್ದ ಹರಿ ಸ್ವಾಮಿಯೆಂದು ಮಥಿಸುವರು ಗಡ
ಪೊದ್ದಿ ಇವನ ಪಾದವ ಈಶ ಮೊದಲಾದ ದೇವರ್
ಬುದ್ಧಿವಂತರಾದರೆಂದು ಶ್ರುತಿ ಕೀರ್ತಿಸಿತು
ಸುಮತವನರ್ಚಿಸಿತು ಜ್ಞಾನದೀಪ ಹೆಚ್ಚಿಸಿತು ೧೫

ಶ್ರುತಿಸ್ಮೃತಿಗಳ ಅರ್ಥಮಥಿಸಿ ಮಾಡಿದ ನಮ್ಮ
ಕೃತಿಯನ್ನೆ ನಂಬಿರೊ ನಾವಂದದ್ದೆ ತತ್ವ
ಮತದ ಹಮ್ಮನವ ಮಾಡದಲೆ ಮೇಲಣ ಸ
ದ್ಗತಿ ಬೇಕೆಂಬುವರೆಲ್ಲರಿದೆ ಕೇಳಿರೊ
ಎಂದೆಂದು ಪೇಳಿರೊ ಕುಮತಿಯ ಕೀಳಿರೊ
ಅಘಂಗಳ ಸೀಳಿರೊ ೧೬

ರಾಗ ವಸಂತಭೈರವಿ ತ್ರಿಪುಟತಾಳ

ಎಲ್ಲಾ ಇಲ್ಲವೆಂಬುವನ ನಾಲಿಗೆ ಇಲ್ಲವಾಯಿ
ತಲ್ಲ ಇನ್ನೆಂತು ನಮ್ಮ ಕೂಡೆ ನುಡಿವ

ಬಲ್ಲವರಿಗಿಂತು ಬೋಧಿಸಿ ಜಗತು ಸತ್ಯವೆಂದು
ನಿಲ್ಲಿಸಿದ ಮಧ್ವಮುನಿಗೆಣೆಗಾಣೆ
ಇಂತೆನ್ನದೆ ಮಾಣೆ ಶ್ರೀಹರಿಯಾಣೆ ೧೭

ಈಗಲುಂಟು ಮೇಗಲೀ ಜಗವಿಲ್ಲ ಎಂಬ ಮಾತು ನಿನ
ಗಾಗದಲ್ಲ ತ್ರೈಕಾಲಿಕ ನಿಷೇಧವೆಂಬುವಗೆ
ಕಾಗಿಯಂತೆ ಒಂದು ಭಾಗದರ್ಥವ ಕಂಡು ಮತ್ತೊಂದು
ಭಾಗವ ಕಾಣದಿರಲು ಕಾಣನೆನ್ನರೆ
ನಿನ್ನಾಧಮನೆನ್ನರೆ ನೋಡು ನೋಡು ಕಣ್ಣಾರೆ ೧೮

ಇಲ್ಲಿ ಇಲ್ಲವೆನ್ನೆ ಇನ್ನೊಂದು ದೇಶದೊಳಿಕ್ಕು ಈಗ
ಇಲ್ಲವೆನ್ನೆ ಇನ್ನೊಂದು ಕಾಲದೊಳಿಪ್ಪುದು
ಎಲ್ಲ ದೇಶವೆಲ್ಲ ಕಾಲದಲ್ಲಿ ಜಗವಿಲ್ಲವೆನ್ನೆ
ಮೊಲ್ಲನ ಕೊಂಬಿನಂತೆ ಕೇಳಷ್ಟಲ್ಲದೆ ಪೊಕ್ಕು
ಸಲ್ಲದಲ್ಲ ಈ ವಾಕು ಇನ್ನು ಕಲಹ ಸಾಕು ೧೯

ಬಲ್ಲವರು ಸತ್ಯವಾಗಿ ಈ ಜಗವಿಲ್ಲೆಂಬರ್ಥವ
ನೊಲ್ಲರಲ್ಲ ಶ್ರುತಿಯೊಳು ನಿತ್ಯವೆಂಬ ಪದವ
ಇಲ್ಲವಾಗಿ ಇನ್ನೊಂದು ಕಡೆಯಿಂದ ತಂದರೆ ಬಾಯೊಳು
ಕಲ್ಲೆ ಬೀಳುವುದಲ್ಲ ಮಿಥ್ಯವೆಂಬ ಪದವ
ತತ್ವ ವಾದಿಗಾಗದವ ಉನ್ಮತ್ತನೇನ ನೊರೆವ ೨೦

ಆದಿತಾಳ

ದ್ವಾಸುಪರ್ಣಾವೆಂಬ ವೇದ ಭೇದವನ್ನೆ ಪೇಳಲು ಸ
ರ್ವೇಶನೆ ನಾನೆಂಬ ಮತನಾಸೆಯು ಸಲ್ಲ
ಈಶತನ ಪೊಂದಮೇಲೆ ಅದೀತೆಂಬಮಾತು ವಿಚಾ
ರಿಸಲೆ ಕೂಡದು ನಿನಗೋಸುಗ ತನ್ನ
ಈಶತ್ವವನು ಚೆನ್ನಕೇಶವ ಬಿಡುವನೆ ನಿನ್ನ ೨೧

ಈ ಶ್ರುತಿಯ ಬಲದಿಂದ ಈಶತೆಯುಪೊಕ್ಕಳಿಸುವಾಸೆಬೇಡ
ಈಶತ್ವ ಪೋದಮೇಲೆ ಶ್ರುತಿ
ಈಶನೈಕ್ಯ ಪೇಳ್ವುದೆ ಅವನೀಶತ್ವ ಪುಸಿ ಮಾತಿನಿಂದ
ಹೇಸಿಯೆಂತಕ್ಕು ಅನ್ಯೋನ್ಯಾಶ್ರಯುಬೇಕು
ಸಾಕು ಸಾಕು ನಿನ್ನ ಸೊಕ್ಕು ೨೨

ಅಂದು ಭೃಗುಮುನಿ ಬಂದು ಚೆಂದದ ವಕ್ಷವ ಕಾಲಿ
ಲಿಂದ ಲೊದೆಯಲವನ ಕುಂದ ನೋಡದೆ
ಇಂದಿರೇಶ ತನ್ನ ಸರ್ವೇಶ್ವರತ್ವವ ರಕ್ಷಿಸಿದ
ನೆಂದು ಕೊಂಡಾಡಿದ ಶ್ರುತಿಯಿಂದ ಹರಿಯು
ತನ್ನ ತಂದುಪಕಾರಿಯ ಚೆಂದವಾದ ಸಿರಿಯ
ಕುಂದಿಸದೆಂದರಿಯು ೨೩

ರಾಗ ಭೈರವಿ ಆದಿತಾಳ

ಕಾಲಿಲ್ಲ ಕೈಗಳಿಲ್ಲ ಕರ್ಣಂಗಳಿಲ್ಲ ಕಂಗ
ಳಿಲ್ಲ ನಾಲಿಗೆಯಿಲ್ಲವೆನ್ನೆ ನೋವ ಮಾನವ
ಈ ಲೋಕದಿ ಚಲುವ ಕಾಮನ ಗೆಲುವಾಕಾರದ
ಶ್ರೀಲೋಲನ ನಿರಾಕಾರನೆಂದು ಪೇಳ್ವರೆ
ಸಂತರಿದ ಕೇಳ್ವರೆ ಇಂತೆನ್ನಲು ಬಾಳ್ವರೆ ೨೪

ಗುಣವಿಲ್ಲವೆಂಬ ಮಾತು ನಿನಗೆ ಹೀನವಾದರೆ
ಅನಂತನಿಗೀಮಾತನೆನ್ನಬಹುದೆ
ಜನರು ಮಾಯಾವಿಯೆಂದು ನಿನ್ನನೆನ್ನರೆ ಮಾನವ
ಸನಕಾದಿ ಮುನಿ ಮಾನ್ಯನ ಮಾಯಾವಿ
ಎಂಬರೆ ಬುಧರಿದ ಕೈಗೊಂಬರೆ ಬಾಯೊಳ್ಮಂಣತುಂಬರೆ ೨೫

ಇಂತು ಪರಮತವೆಂಬ ಕಂತೆಯ ಪರಿದು
ಚಿಂತಾಮಣಿಯ ಸಂತತ ನೆನೆದು

ಅಂತವಿಲ್ಲದ ಪದವ ಸಂತೋಷ ತೀರ್ಥರ ಕೃಪೆ
ಯಾಂತೈದುವೆನು ಅಲ್ಲಿ ಶ್ರೀ ಮಾಧವನು
ಈವ ಮೋದವನು ೨೬

ಹತ್ತು ಮತ್ತೆ ನಾಲ್ಕು ಲೋಕದ ಜೀವ ಮೊತ್ತವ ತನ್ನ
ಯುಕ್ತಿಯಿಂದ ಮಾಡಿ ತತ್ತಸ್ಥಾನದಲಿಟ್ಟ
ಸತ್ಯಲೋಕದೊಡೆಯನೆಡೆಗೆ ಪೋದಮುಡುವೆನು ಹರಿ
ತತ್ವದ ಬಿತ್ತರವ ತೋರುತಿರಲಿ
ಅತ್ತ ಇತ್ತ ಪೋಗದಂತೆ ಚಿತ್ತವ ತಿರುಹುತಿರಲಿ
ಮುಕ್ತಿ ಪಥದತ್ತ ಮನವ ನಡೆಸುತಿರಲಿ
ಅರ್ಥಿಯ ಭೃತ್ಯನ ಭಾರ ನಿತ್ಯದಿ ಪೊತ್ತಿರಲಿ ೨೭

ಅ ಟ ತಾ ಳ

ಕಕ್ಕಸ ರಕ್ಕಸ ರುಕ್ಕು ತಗ್ಗಿಸಿಡಂಗೆ
ದಕ್ಷನ ಶಿಕ್ಷಿಸಿದವಗೆ
ಯಕ್ಷ ಪತಿಯ ಸಖನೆನಿಪ ಕೈಲಾಸದ
ಮುಕ್ಕಣ್ಣಗಾನು ಕೈ ಮುಗಿವೆನು
ಮುಖ್ಯ ಮನಸ್ತತ್ವಾಭಿಮಾನಿಯಾಗೆ ನೀನು
ದುಷ್ಕರ್ಮ ತತಿ ನಿನ್ನ ಕೃಪೆಯಿಂದ ನೀಗುವೆನು
ಶುಷ್ಕವಾದಿಗಳ ಕಂಡಲಿ ನಗುವೆನು
ಭಕ್ತಿ ಪಥವನು ಹಿತವೆಂದು ಬಗೆವೆನು
ನೀನಿತ್ತ ಜ್ಞಾನದಿಂದ ಮುಕ್ತಿಗೆ ಪೋಗುವೆನು ೨೮

ಸಕಲ ಸುರರಂಘ್ರಿಗೆರಗುವೆ ಗುರುಗಳ
ಏಕಸಿತವಾದ ಪಾದ ಪದುಮವ ನೆನೆದು
ನಿಖಿಳ ಜಗವ ಕಾಪ ಸಾರೇಯಣನ ಕಥೆಯ
ಭಕುತಿಯಿಂದಾನು ಬಣ್ಣಿಪೆನು
ಯುಕುತಿ ಕೋವಿದರ ಕುಣಿಸುವೆನು

ಮುಕುತಿಯ ಸುಖವನುಣಿಸುವೆನು
ವಿಕಳರ ಮತವ ಮಣಿಸುವೆನು ೨೯

ರಾಗ ಸೌರಾಷ್ಟ್ರ ರೂಪಕತಾಳ

ಇಂದ್ರನ್ನ ರಾಜ್ಯವ ತಂದನ್ನ ಶುಭಗುಣ
ಸಾಂದ್ರನ್ನ ಸುರಸಭಾ ಚಂದ್ರನ್ನ
ನಂದನ್ನ ಕಂದನ್ನ ವಂದ್ಯನ್ನ ನಿತ್ಯಾ
ನಂದನ್ನ ತುತಿಪೆ ಮುಕುಂದನ್ನ ೩೦

ಶೌರಿಯ ನೆನೆವೆ ಮುದಾರಿಯ ಕುಜನರ
ವೈರಿಯ ಮಂದರೋದ್ಧಾರಿಯ
ಹರಿಯ ದುರಿತ ನಿವಾರಿಯ ಸುಜನೋಪ
ಕಾರಿಯ ಮುಕುತಿಗೆ ದಾರಿಯ ೩೧

ನೀಲನ್ನ ನಿಜ ಜನಪಾಲನ್ನ ನಿರ್ಮಲ
ಶೀಲನ್ನ ಸುಚರಿತ್ರ ಜಾಲನ್ನ
ಬಾಲನ್ನ ಸಂಗೀತ ಲೋಲನ್ನ ತುತಿಪೆನು
ಕಾಲನವರಿಗೆ ಅನಲನ್ನ ೩೨

ಇಷ್ಟನ್ನ ದುರಿತಘಟ್ಟನ್ನ ಜಗಕತಿ
ಧಿಟ್ಟನ್ನ ಸತತ ಸಂತುಷ್ಟನ್ನ
ಶಿಷ್ಟನ್ನ ಶುಭಗುಣ ಪುಷ್ಟನ್ನ ತುತಿಪೆನು
ತ್ಕೃಷ್ಟನ್ನ ಶ್ರುತಿಗಿಂಬುಗೊಟ್ಟನ್ನ ೩೩

ರಂಗನ್ನ ಕರುಣಾಂತರಂಗನ್ನ ಖಳಕುಲ
ಭಂಗನ್ನ ನಿಜ ಜನ ಸಂಗನ್ನ
ಅಂಗನ್ನ ಜನಕ ಅನಂಗನ್ನ ನಿತ್ಯ ಶು
ಭಾಂಗನ್ನ ತುತಿಪೆ ನುತ್ತುಂಗನ್ನ ೩೪

ಶ್ಲೋಕ:—

ತರವಃಕಿನ್ನ ಜೀವಂತಿ ಭಸ್ತ್ರಾಃಕಿನ್ನಶ್ವಸಂತ್ಯುತ
ನಖಾದಂತಿ ನಮೇಹಂತಿ ಕಿಂಗ್ರಾಮ ಪಶವೋಽಪರೇ

ಬಿಲೇಬತೋರು ಕ್ರಮವಿಕ್ರಮಾನ್ಯೇ
ನಶೃಣ್ವತಃ ಕರ್ಣಪುಟೇ ನರಸ್ಯ
ಜಿಹ್ವಾಽಸತೀ ದಾರ್ದುರಿ ಕೇವಸೂತ
ನಚೋತ್ಗಾಯತ್ಯುರುಗಾಯಗಾಥಾಂ

ಬರ್ಹಾಯತೇ ತೇ ನಯನೇ ನರಾಣಾಂ
ಲಿಂಗಾನಿ ವಿಷ್ಣೋರ್ನ ನಿರೀಕ್ಷಿತೋಯೇ
ಪಾದೌ ನೃಣಾಂತೌ ದ್ರುಮಜನ್ಮ ಭಾಜೌ
ಕ್ಷೇತ್ರಾಣಿ ನಾನುವ್ರಜತೋಽಹರೇರ್ಯೌ

ಪದ ರೂಪಕತಾಳ

ಹರಿಕಥೆಗಳ ಕೇಳದವ ಬಹು ಕಾಲ ಬಾ
ಳ್ದರೆ ಫಲವೇನು ಕಾನನದ
ಮರ ಸಾಸಿರ ವರುಷವಿರದೆ ಕಾಗಿಯು ಪೆ
ಸರು ಚಿರಜೀವಿಯೆನರೆ ಸಜ್ಜನರು ॥೨೪

ಕಾರುಕನ ತಿತ್ತಿ ಶ್ವಾಸವ ಬಿಡದೆ
ಊರ ನರಿ ನಾಯಿ ಹಂದಿಗಳು
ಪೂರೈಸಿಕೊಳ್ಳವೆ ತಮತಮ್ಮುದರ
ಮಾರಗೊಳಗಾಗಿ ರಮಿಸವೆ ॥೨೬

ಮೂಷಿಕನ ಬಿಲದಂತೆ ಹರಿಕಥೆ ಕೇಳಿ ಸಂ
ತೋಷಿಸದವನ ಕರ್ಣಂಗಳು
ಶ್ರೀಶನ್ನ ಕ್ಷೇತ್ರಕ್ಕೆ ಪೋಗದ ಕಾಲುಗಳು
ಪಾಷಾಣ ಪ್ರತಿಮೆಯಂಘ್ರಿಗಳು ॥೨೭

ಹರಿಯ ನೋಡದ ಕಣ್ಣು ನವಿಲಿಯ ಕಣ್ಣು
ನರಹರಿಯ ಪಾಡದವನ ಜಿಹ್ವೆ
ವರಲಿವರಲಿ ಬಳಲುವ ಮಂಡೂಕನ ಜಿಹ್ವೆ
ಹರಿಗೆರಗದ ನರನೆ ವಾನರನು ೩೮

ಶ್ಲೋಕ:—

ತವಾಪ್ಯೇತರ್ಹಿ ಕೌರವ್ಯ ಸಪ್ತಾಹಂ ಜೀವಿತಾ ವಧಿಃ
ಉಪಕಲ್ಪ ಯತತ್ಸರ್ವಂ ಯತಾವತ್ಸಾಂ ಪರಾಯಿಕಂ ||
ಖಟ್ವಾಂಗೋ ನಾಮರಾಜರ್ಷಿಃ
ಜ್ಞಾತ್ವೇಯತ್ರಾಮಿಹಾಯುಷಃ
ಮುಹೂರ್ತಾತ್ಸಂಗಮುತ್ಸೃಜ್ಯ
ಗತವಾನಭಯಂ ಹರಿಂ

ಝಂಪೆತಾಳ

ಏಳು ದಿನ ಹರಿಕಥೆಯ ಕೇಳಿ ಒಬ್ಬ
ಧಾಳಿ ಇಡನೆ ಹರಿಪುರಕೆ
ಶ್ರೀಲೋಲನ ನೆನೆದೆರಡು ಘಳಿಗೆಯೊಳೊಬ್ಬ
ಮೇಲಣ ಮುಕುತಿ ಗೆರಗನೆ ೩೯

ಆದರಿಂದ ನಾರಾಯಣನ ಕೊಂಡಾಡುವರು
ಬುಧರು ಸಂಸಾರವ ನೊದೆದು
ಮುದದಿಂದ ವೈಕುಂಠಕ್ಕೈದಿ ಶ್ರೀಕೃಷ್ಣನ
ಪದಸನ್ನಿಧಿಯಲಿ ಸುಖಿಸುವರು ೪೦

ಕ:—

ತತೋ ವೈಕುಂಠ ಮಗಮದ್ಬಾಸ್ವರಂ ತಮಸಃಪರಂ
ಯತ್ರ ನಾರಾಯಣ ಸ್ಸಾಕ್ಷಾನ್ಯಾಸಿನಾಂ ಪರಮಾಗತಿಃ ||
ಶಾಂತಾನಾಂನ್ಯಸ್ತ ದಂಡಾನಾಂ
ಯತೋನಾ ವರ್ತತೇ ಯತಿಃ

ರಾಗ ತೋಡಿ ರೂಪಕತಾಳ

ಸಾಕ್ಷಾನ್ನಾರಾಯಣನಿಪ್ಪ ವೈಕುಂಠವ
ಪೊಕ್ಕು ಬದುಕುವುದೆ ಮೋಕ್ಷ
ಪಕ್ಷಪಾತವಲ್ಲ ಶುಕಮುನಿವಾಕ್ಯ ವಿ
ವೇಕಿಸಿ ನೀವೇ ನೋಡಿರೊ ೪೧

ಎಂದೆಂದು ವೈಕುಂಠ ಲೋಕಕ್ಕೆ ನಾಶವಿಲ್ಲ
ಇಂದಿರೇಶನೆ ವಿಕುಂಠ
ಹೊಂದದವನ ಮನೆಯೆನಿಪ ವೈಕುಂಠಕ್ಕೆ
ಮುಂದಮುಕ್ತಿಯು ನಾಶವುಂಟೆ ೪೨

ತನ್ನ ಮನೆ ಪೋದ ಮೇಲೆ ನಾರಾಯಣ
ಬನ್ನಗನಂತೆ ಕಾನನದಿ
ಪನ್ನಿತ್ರೆಯರ ಕೂಡಿ ಪಣ್ಫಲವ ಮೆಲುವನೆ
ಮುನ್ನ ಬಂದಂತೆ ನುಡಿವರೆ ೪೩

ನಶ್ವರವಲ್ಲದ ಈ ಪಗವೆ ಬುಧರಿಗೆ
ಶಾಶ್ವತ ಸ್ಥಾನವೆನಿಪುದು
ಭಾಸ್ವರ ವೈಕುಂಠವದರಿಂದ ಎಲ್ಲರ್ಗೆ
ನಿಶ್ಚಿಂತ ಮುಕುತಿ ಕಾಣಿರೊ ೪೪

ಪರಮಾಂಗತಿಯೆಂದು ವೈಕುಂಠದರಸನ ಶ್ರೀ
ವರನ ಶುಕಯೋಗಿ ವರ್ಣಿಸಿದ
ಅರಿಕೆಯುಳ್ಳ ಬುಧರು ಅದರಿಂದ ಪದವನ್ನಿ
ಪರಮ ಮುಕುತಿಯೆನ್ನಬೇಕು ೪೫

ಧನ್ಯಯತಿಗಳಿಗೀ ಲೋಕ ಪೊಕ್ಕಮೇಲೆ
ಪುನರಾವರ್ತಿ ಇಲ್ಲ ಗಡ
ಇನ್ನೊಂದು ಮುಖ್ಯ ಮುಕುತಿ ಉಂಟೆಂಬ ಬುಧರ
ಮಾನವ ಮರ್ದಿಸಿತಲ್ಲ ೪೬

'ನಚ ಪುನರಾವರ್ತತೆ' ಎಂಬ ವೇದಾಂತ ವ
ರ್ಣಿಸಿದೆ ಮುಕುತಿಯು ಬಿಟ್ಟಿನ್ನೊಂದು
ಹೆಸರಿಲ್ಲದ ಮುಕುತಿ ಸಲ್ಲದಾಗಿ ನಮ್ಮ
ಎಸೆವ ವೈಕುಂಠವೆ ಮೋಕ್ಷ ೪೭

ಕೇಳೆಲೊ ವಾದಿ ತಮವೆಂಬ ನಿನ್ನ ಅಜ್ಞಾನ
ಬೀಳು ಕೊಟ್ಟು ಲೋಕ ಪುಸಿಯೆ
ಆಲೋಚಿಸಿಕೊ ನಿನ್ನ ಮತದ ರಹಸ್ಯವ
ಈ ಲೋಕವೆ ದಿವ್ಯ ಮುಕ್ತಿ ೪೮

ಇಂತು ನೋಡಲು ಸರ್ವ ಪದದ ಸಂಪದ ನಿನಗೆ
ಭ್ರಾಂತಿ ಗಂಟಲ ಗಾಣವಾಯ್ತು
ಹಂತತನವ ಬಿಡು ನಾವೆಂದರ್ಥವನ್ನೆ
ಸಂತೋಷದಿಂದಂಗೀಕರಿಸು ೪೯

ಶ್ಲೋಕ:—

ಪಾಂಚರಾತ್ರಾಗಮೇ:—

ವೈಕುಂಠ ನಾಮ ಲೋಕೋಯಂ
ದಿವ್ಯಂ ನಿತ್ಯಂ ಸನಾತನಂ
ಅವೈಷ್ಣವಾನಾಮಪ್ರಾಪ್ಯಂ
ಗುಣತ್ರಯ ವಿವರ್ಜಿತಂ ।
ನಿತ್ಯಸಿದ್ಧೈ ಸ್ಸಮಾಕೀರ್ಣಂ ತನ್ಮಯಂ ಪಾಂಚಕಾಲಿಕೈಃ
ಸಭಾಪ್ರಾಸಾದ ಸಂಯುಕ್ತಂ ವನೈಶ್ಚೋಪವನೈರ್ಯುತಂ
ವಾಪೀಕೂಪತಟಾಕೈಶ್ಚ ವೃಕ್ಷ ಷಂಡೈಶ್ಚ ಮಂಡಿತಂ
ಅಪ್ರಾಕೃತಂ ಸುರೈರ್ವಂದ್ಯಂ ಅಯುತಾರ್ಕ ಸಮಪ್ರಭಂ
ಪ್ರಕೃಷ್ಟ ಸತ್ವರಾಶಿತ್ವಾಂ ಕದಾದ್ರಕ್ಷ್ಯಾಮಿ ಚಕ್ಷುಷಾ
ಬ್ರಹ್ಮಲೋಕಗತಾದೂರ್ಧ್ವಂ ಯತ್ಪುರಂ ಚಕ್ರಪಾಣಿನಃ
ಗೋವಿಂದ ಭಕ್ತಿ ಮುಹತಾಂ ನರಾಣಾಂಚ ನಸಂಶಯಃ

ರೂ ಪ ಕ ತಾ ಳ

ಲೋಕೈಕನಾಥ ನಾರಾಯಣಗೆ ಪ್ರಿಯವಾದ
ವೈಕುಂಠ ಪುರಿಯ ವರ್ಣಿಪೆನು
ಶ್ರೀ ಕಾಂತನಲ್ಲಿ ಮುಕ್ತರಿಗೆ ಎಂದೆಂದು ನಿ
ರಾಕುಲ ಸುಖವಿತ್ತು ಪೊರೆವ ೨೧

ಶ್ರೀಕೃಷ್ಣನಂಘ್ರಿಯ ಸೆಸೆಯುದವರಿಗೆ ಈ
ಲೋಕವೆಂದೆಂದು ದೊರಕದು
ಪ್ರಕೃಷ್ಟ ತತ್ವ ರಾಶಿಗಳಲ್ಲಿಷ್ಟವು ಗಡ
ಪ್ರಾಕೃತವಲ್ಲ ನಿತ್ಯ ಗಡ ೨೨

ಎಂದೆಂದು ನಿತ್ಯ ಸನಾತನವೆಂಬ ಈ
ಚೆಂದದ ಪದವು ದಿವ್ಯ ಗಡ
ಸಿಂದ್ಯ ತ್ರಿಗುಣಂಗಳು ಹೊಂದವೀ ಲೋಕಕ್ಕೆ
ಕುಂದುಕೊರತೆಯಿಲ್ಲ ಗಡ ೨೩

ಆದರಿಂಪ ಜೀವಬ್ರಾಹ್ಮಾದಿ ದೇವರೆಲ್ಲಗು ಹರಿಯು
ಸದನವೆನಿಪ ಪುರತ್ರಯಕೆ
ಮುದದಿಂದ ಕೈ ಮುಗಿದು ಪೂಜಿಸುವರೆಂದೆಂದೀ
ಪದ ನಿತ್ಯ ಸಿದ್ಧಾಸ್ಪದ ಗಡ ೨೪

ಅಲ್ಲದ್ದ ವಾಪಿ ತಟಾಕಂಗಳಾಗಿ ಮತ್ತೆ
ಅಲ್ಲದ್ದ ಮನೆ ಉಪ್ಪರಿಗೆಗಳು
ಬಲ್ಲಿದ ರಮೆ ತನ್ನ ನಲ್ಲನ ಚಿತ್ತವ
ವಲ್ಲಿಸಬೇಕೆಂದಿಹಳು ಗಡ ೨೫

ಅರ್ಕ ಕೋಟಿಗಳಂತೆ ವೈಕುಂಠ ಲೋಕ ದಶ
ದಿಕ್ಕಿನೊಳಗೆ ಬೆಳಗುವುದು
ಅಕ್ಕು ಮಿಗಲ್ಲದೆ ಇಂಥಾ ಕಾಂತಿ ಮಿಕ್ಕವರಿಗೆ.
ಬರ್ಕ ನೀವೇ ವಿಚಾರಿಸಿಕೊಳ್ಳಿರೊ ೨೬

ವೈಕುಂಠವೆಂಬ ಹರಿಯು ಲೋಕ ಬೊಮ್ಮನ
ಲೋಕಕಿಂತಲು ಮೇಲಿಹುದು
ಶೋಕ ರಹಿತರಾದ ಸಿದ್ಧ ಸಾಧ್ಯರಲ್ಲಿ
ಬೇಕಾದ ಸುಖವನುಣುತಿಹರು ೨೪೭

ಲಕ್ಷ ಯೋಜನ – ಮೇಲಿಪ್ಪ ನಂತಾಸನ
ಲಕ್ಷ್ಮೀಶನಿಹ ಶ್ವೇತದ್ವೀಪ
ಲಕ್ಷ ಐವತ್ತು ವೈಕುಂಠ ಇಪ್ಪತ್ತೈದು
ಲಕ್ಷ ಷೋಡಶ ಕೋಟಿಲಿಹುದು ೨೪೭

ಶ್ಲೋಕ:—

ಸ ವೈ ಮಹಾಭಾಗವತಃ ಪರೀಕ್ಷಿ
ದ್ಯೇನಾಪವರ್ಗಾಖ್ಯ ಮದಭ್ರ ಬುದ್ಧಿಃ
ಜ್ಞಾನೇನ ವೈಯಾಸಿಕಿಶಬ್ದಿತೇನ
ಭೇಜೇ ಖಗೇಂದ್ರ ಧ್ವಜಪಾದಮೂಲಮ್

ರೂಪಕತಾಳ

ಜ್ಞಾನ ಸಾಧ್ಯವಾದ ಮುಖ್ಯ ಮುಕ್ತಿಸ್ಥಾನ
ಶ್ರೀನಾಥನಿಹ ವೈಕುಂಠ
'ಏನಾಪವರ್ಗಾಖ್ಯ' ಎಂಬ ಭಾಗವತೋಕ್ತಿ
ತಾನೇ ನಿರ್ಣೈಸಿ ಪೇಳುವುದು ೨೫೦

ಇದೆ ಅಪವರ್ಗವೆಂದು ವ್ಯಾಸದೇವನೊಲಿದು ಪೇ
ಳಿದ ಹರಿಯು ಪಾದವೆ ಮೋಕ್ಷ
ಅಧಮ ವಾದಿಗಳಿಗೆ ಇದು ಕೇಳಿ ಚಿತ್ತದ
ಮದವಳಿವುದು ಏನಾಶ್ಚರ್ಯ ೨೫೧

ನಾಡ ಖೋಡಿಗಳು ವ್ಯಾಸನ ವಚನ ನಂಬದೆ
ಮೂಢಗರ್ವರು ಗುರುವೆನಿಪ

ಪ್ರೌಢರಿಗೆ ಸಮ್ಮತವಾದ ವ್ಯಾಸರ ಮಾತ
ನೋಡಿ ಮನ್ನಿಸದಿರೆ ನಗರೆ ೬೦

'ಭೇ ಜೇ ಖಗೇಂದ್ರ ಧ್ವಜಪಾದ ಮೂಲ' ವೆಂ
ದೀ ಜಗಖ್ಯಾತ ಭಾಗವತ
ಓಜೆಯಿಂದಲಿ ಪೇಳಿತಾಗಿ ಅನ್ಯರ ಮತ
ರಾಜಿಪುದೆಂತೊ ಸಭೆಯೊಳಗೆ ೬೧

ಹೇಳೆಲೊ ವಾದಿ ಖಗೇಂಗ್ರಧ್ವಜನ ಪಾದ
ಮೂಲ ನಿನ್ನ ಮುಕ್ತಿಯೊಳುಂಟೆ
ಈ ಲಿಂಗ ಹರಿಲೋಕಕ್ಕೆ ಸಾಧಾರಣವೆಂಬು
ಬಾಲಕರೆಲ್ಲರ್ಬಲ್ಲನೈಸೆ ೬೨

ಅಲ್ಲಿ ಕೃಷ್ಣನಪಾದ ಸೇವೆಯು ಕೈವಲ್ಯ
ವಲ್ಲದೆ ಇವನ್ಯೈಕ್ಯ ನಲ್ಲ
ಎಲ್ಲರು ಬಲ್ಲರು ಹರಿಯು ಭೇದಗಳೀ
ವಲ್ಲದಲಿಲ್ಲವೆಂಬುದನು ೬೩

ಖಗೇಂದ್ರನಾಮವೆ ಅಲ್ಲಿ ತರತಮಭೇದ
ಬಗೆಯ ನರುಹಿತು ಪಾದಶಬ್ದ
ಭಗವಾನ್ ಸಾಕಾರನೆಂದು ವ್ಯಾಸೋಕ್ತಿ ಕಾಮ
ಧೇನುವಿಗೆ ತಾನಿನ್ನು ಪ್ರತಿಯೆ ೬೪

ಶ್ಲೋಕ—

ನವರ್ತತೇ ಯತ್ರ ರಜಸ್ತಮಸ್ತಯೋಃ
ಸತ್ವಂಚ ಮಿಶ್ರಂ ನಚ ಕಾಲತಿಕ್ರಮಃ
ನಯತ್ರ ಮಾಯಾ ಕಿಮುತಾಪದೇಹರೇ
ರನು ವ್ರತಾಯತ್ರ ಸುರಾಸುರಾರ್ಚಿತಾಃ

ಪದ ರೂಪಕತಾಳ

ಮುಕ್ತಿಯೊಳಿಹ ಭೇದ ಸತ್ಯವೆಂಬುದು ಸಿದ್ಧ
ಮತ್ತೆ 'ಸಾಯತ್ರ ಪ್ರಮಾಣ' ವೆಂಬ
ಯುಕ್ತಿ ಭಾಗವತೋಕ್ತಿ ಮುಕ್ತರ ಭೇದವ
ಸತ್ಯವೆಂದು ಸ್ಥಾಪಿಸಿತಲ್ಲ ೬೫

'ಹರೇರನುವ್ರತಾ ಯತ್ರ'ವೆಂಬೀ ಸ್ಮೃತಿ
ನಿರೂಪಿಸಿದ ಹರಿಭೇದ
ಪರಮಾರ್ಥ ಸತ್ಯ ನಿನಗೂ ಅದೇ ಮಾಯಿ
ಇರದೆ ಕಲ್ಪಿತವಾಗುವುದು ೬೬

ಈಪನ್ನಯವಿರೆ 'ಯತ್ರಮಾಯಾನೇತಿ'
ವ್ಯಾಸನ ಸಾಮಾನ್ಯ ನಿಷೇಧ
ಹೇಸಿ ಕೂಡುವುದೆ ಹುಟ್ಟಿದ ಘಟವಿರಲು
ನಾಪ್ತ್ಯತ್ರ ಘಟವೆಂದೆನ್ನುವರೆ ೬೭

ನಿನ್ನಿಷ್ಟಿಗೆ ಬೇಕಾದರ್ಥ ಪೇಳ್ವುದೆ ಶಬ್ದ
ತನ್ನ ಶಕ್ತ್ಯರ್ಥವ ತೊರೆದು
ಎನ್ನ ಬಹುದ್ವೈಸೆ ತುಹಿತ ಪರಶಬ್ದ
ವಹ್ನಿ ಯರ್ಥವನು ನುಡಿವುದೆ ೬೮

ಶ್ಲೋಕ:—

ತನ್ಮಧ್ಯೇ ನಗರೀ ದಿವ್ಯ ಸಾಯೋಧ್ಯೇತಿ ಪ್ರಕೀರ್ತಿತಾಂ
ಆರೂಢ ಯೌವನೈರ್ನಿತ್ಯಾ ದಿವ್ಯನಾರೀನರೈರ್ಯುತಾ

ಪದ

ರತ್ನ ಕೆತ್ತಿಸಿದ ಚಿನ್ನದೇಳು ಕೋಟೆ
ಮನ್ಮಥನ್ವೈಯನ ಪುರಿಗೆ
ತನ್ಮಧ್ಯದಲ್ಲಿ ಅಯೋಧ್ಯಾನಗರಿಗೆ ಸು
ವರ್ಣ ಗೋಪುರ ಪೊಪ್ಪುತಿಹುದು ೬೯

ಸಿರಿದೇವಿ ತಾನೆ ಮುರಹರನ ಪಟ್ಟಣದಲ್ಲಿ
ಪರಿ ಪರಿಯ ಮನೆಯ ರೂಪದಲಿ
ಏರಿಏರಿ ಮಿಂಚುವಳು ಅಚಲ ಪ್ರಕೃತಿಯಿಂದ
ವಿರಚಿತ ಗೃಹಗಳಲ್ಲಿರವು ೭೦

ಶ್ಲೋಕ:—

ನತದ್ಭಾಸಯತೇ ಸೂರ್ಯೋ
ನ ಶಶಾಂಕೋ ನ ಪಾವಕಃ
ಯದ್ಗತ್ವಾ ನನಿವರ್ತಂತೇ
ತದ್ಧಾಮ ಪರಮಂ ಮಮ

ಪದ ಆದಿತಾಳ

ಅನರ್ಘ್ಯ ರತ್ನಮಂದಿರ ದುಷ್ಪರಿಗೆಗಳ
ಬಣ್ಣಿಸಲೆನ್ನಳವಲ್ಲ
ರನ್ನದಾದ್ವಾರ ಪ್ರಕರ ಕಾಂತಿಗೆ ತನ್ನಿಂ
ತಾನೆ ಪೋಡುವುದಂಧಕಾರ ೭೧

'ಅಯುತಾರ್ಕ ಸಮಪ್ರಭ' ಮೆಂಬ ಪಾಂಚರಾತ್ರ
ಭಯವಿಲ್ಲದಚ್ಯುತನಪುರವ
ಪ್ರಿಯದಿಂದ ಕೊಂಡಾಡಿತಾಗಿ ಆ ಪುರ ಕತ್ತ
ಲೆಯ ಕೆಡಿಸುವದೊಂದಚ್ಚರಿಯೆ ೭೨

ನಾಲ್ಕು ದಿಕ್ಕುಗಳಲಿ ಬಾಗಿಲ ಸಾಲ್ಗಳು
ಚೌಕ ಶುದ್ಧದ ಕೋಟೆಯೊಳಗೆ
ಲೋಕಪಾಲರ ಮನೆಯೊಳಗಿಂದಲ್ಲಿಗಲ್ಲಿಗೆ
ಶ್ರೀ ಕಾಂತನೊಮ್ಮೊಮ್ಮೆ ಬಾಹ ೭೩

'ಸಾಯನಾನ್ಬ್ರಹ್ಮಾಗಮಯತಿ' ಎಂಬ ಶ್ರುತಿ
ನಯದಿಂದ ನಿರ್ಣೈಸಿತಾಗಿ
ಪ್ರಿಯವಾದ ಲಿಂಗ ದೇಹದ ಜೀವನ್ಮುಕ್ತರು
ಜಯಜಯವೆನುತಿಹರಲ್ಲಿ ೭೪

ಅಪ್ರತೀಕಾಲಂಬ ನರನು ಮುಖ್ಯ ಪ್ರಾಣ
ಸಪ್ತ ಪ್ರಾಕಾರಂಗಳೊಳಗೆ
ಮುಕ್ತಿ ಪರಿಯಂತ ಭೋಗಗಳುಂಡುಕೊಂ
ಡಿಪ್ಪಂತೆ ಕಟ್ಟು ಮಾಡುವನು ೨೫

ಮುಕ್ತಾ ಮುಕ್ತರು ಕೂಡಿ ಆದರಿಂದ ಬೆರೆಸಿಹರು
ಸಪ್ತ ಪ್ರಾಕಾರಂಗಳೊಳಗೆ
ಚಿತ್ರ ಚಾವಡಿಯೊಳಗೆ ಅಲ್ಲಿದ್ದ ಹರಿಗೆ ಆ
ಮುಕ್ತ ಸುರರು ಬಿನ್ನೈಸುವರು ೨೬

ಮುಕ್ತರಿಗೆ ಮನೆಯಾದ ಹರಿಯಂತಃಪುರದಲಿ
ಸುತ್ತಲಿಪ್ಪುದು ವಿರಜಾನದಿಯು
ತತ್ವಜ್ಞಾನಿಗಳು ಆದರೊಳಗೆ ಮುಳುಗೆ ನಿ
ರ್ಮುಕ್ತವಾಹುದು ಲಿಂಗದೇಹ ೨೭

ಶ್ಲೋಕ:—

ಪ್ರಧಾನ ಪರಮ ವ್ಯೋಮ್ನೋರಂತರಾ ವಿರಜಾನದೀ
ದೇವಾಂಗ ಸ್ವೇದ ಜನಿತಾ ತೋಯೈಪ್ರಸ್ರವಿತಾ ಶುಭಾ
ಶ್ರೇಯೋ ಮೋಕ್ಷ ಪದಂ ದಿವ್ಯಂ ಅಮೃತಂ ವಿಷ್ಣುಮಂದಿರಂ
ಅಕ್ಷರಂ ಪರಮಂ ಧಾಮ ವೈಕುಂಠಂ ಶಾಶ್ವತಂ ಪದಂ
ನಿತ್ಯಂ ಚ ಪರಮಂ ವ್ಯೋಮ ಸರ್ವೋತ್ಕೃಷ್ಟಂ ಸನಾತನಂ
ಪರ್ಯಾಯ ವಾಚಕಾಸ್ತಸ್ಯ ಪದಂಧಾಮ್ನೋಚ್ಯುತಸ್ಯಚ

ರೂಪಕತಾಳ

ಸಪ್ತಮದ್ವಾರ ಪರಿಯಂತ ಬಂಧಕಮಾಯಾ
ಮತ್ತೆ ಮುಕ್ತರಿಪ್ಪ ಹರಿಯ
ಉತ್ತಮಾಂತಃಪುರವಿತ್ತಂಡದ ನಡುವೆ
ಸುತ್ತಲಿಪ್ಪುದು ವಿರಜಾನದಿಯು ೨೮

ಏಳನೆ ಬಾಗಿಲೊಳಿದ್ದ ಜಯ ವಿಜಯರು
ಭೂಲೋಕದಲಿ ಪುಟ್ಟಿದರಾಗಿ
ಕಾಲನ ಭಯವೀವ ಪ್ರಕೃತಿ ಆ ಪರಿಯಂತ
ಕಾಲೂರಿ ಜನರ ಕಟ್ಟುವಳು ೨೯

ಆದರಿಂದೊಳಗೆ ಮುಕ್ತರ್ಪೋಗುವರಲ್ಲದೆ ಮಿಕ್ಕ
ಬುಧರಿಗೆ ಸಂಚಾರಸಲ್ಲ
ಅದಕಾರಣ ನಾರಾಯಣನೆ ಬಂದಲ್ಲಿಗೆ
ಮುದವಿತ್ತ ಸನಕಾದಿಗಳಿಗೆ ೮೦

ಹರಿಯಂತರ್ನಗರಿಗೆ ಪರಮವ್ಯೋಮನಾಮ
ಹೊರಗಿದ್ದ ಪ್ರಕೃತಿ ಪ್ರಧಾನ
ಪುರಾಣವದರಿಂದ ಪ್ರಧಾನ ಪರಮಂ ವ್ಯೋಮಾಂ
ತರದಿ ವಿರಜೆಂದೊರೆದವು ೩೧

ಹರಿಯಂಗದೊಳಗಿದ್ದ ಬೆವರುದಕವಾಗಿ
ಸಿರಿದೇವಿ ತಾನೇ ಪೊರಮಟ್ಟು
ಪರಿವಳು ರಜಶಬ್ದ ಸೂಚಿತ ಗುಣತ್ರಯ
ವಿರದಕಾರಣ ವಿರಜೆಯೆನಿಪಳು ೮೨

ಲೆಕ್ಕವಿಲ್ಲದ ಮುಕ್ತಿ ಯೋಗ್ಯ ಜೀವರನು ಮು
ಸುಕಿರ್ದ ಪ್ರಕೃತಿಯ ಕೆಡಿಸುವ
ಶಕ್ತಿಯುತ್ಯುಕ್ತಿಗೆ ಹರಿಯಂಗ ಸಂಗದ ಉ
ದಕ್ಕವಾದಳು ಲಕ್ಷ್ಮಿದೇವಿ ೮೩

ಶ್ಲೋಕ:—

ನಿಶ್ರೇಯಸಂಚ ನಿರ್ವಾಣಂ ಕೈವಲ್ಯಂ ಮೋಕ್ಷ ಉಚ್ಯತೆ
ನಾನಾಜಾತಿ ಸಮಾಕೀರ್ಣಂ ವೈಕುಂಠಂ ತದ್ಧರೇಃ ಪದಂ

ಝಂಪೆತಾಳ

ವಿರಜೆಯೊಳಗಣ ಪಟ್ಟಣದಿ ಮುಕ್ತರು
ವಿರಂಚಾದಿ ಸುರರು ಮಾನವರು
ತರುಪಕ್ಷಿ ಮೊದಲಾದ ನಾನಾ ಜಾತಿಗಳಿಹರಿ
ವರ ಪ್ರಭೆ ತಮಗಿಂಬುಗೊಡದು ೮೪

ಜಾತಿ ಹೀನರೆಂದು ನಿರಾಕರಿಸದಿರಿ ಶ್ರೀ
ಪತಿ ಮತ್ಸ್ಯ ಕೂರ್ಮದಾಕೃತಿಯಿಂ
ಖ್ಯಾತನಾಗಿರೆ ಬಲ್ಲವರು ಆ ರೂಪಗಳ
ಓತು ಮನ್ನಿಸಿ ತುತಿಸುವರು ೮೫

ಬೆಲ್ಲದಚ್ಚಿನಿಂದ ಮಾಡಿದ ಕಾಸಾರ
ಸಲ್ಲದೆ ಬಲ್ಲ ಬುಧರಿಗೆ
ಕಲ್ಲಿಂದು ಬಿಡುವುದೆ ಮಾಣಿಕ್ಯ ರತ್ನವ
ಅಲ್ಲಿದ್ದ ಜಾತಿ ಶೋಭನವು ೮೬

ಉರಗ ಗರುಡ ಹಂಸ ಮಹಿಷ ಮೇಷ ವೃಷಭ
ಕರಿಮಕರಿ ತುರಗಗಳು
ಸುರರಿಂದ ಮನ್ನಿಸಿ ಕೊಳವೆ ಶಾಮಶಬಳ
ನರರೆಲ್ಲ ನಿರುತ ಪೂಜಿಸರೆ ೮೭

ಉತ್ತರ ಲೋಕದ ನಾನಾ ಜಾತಿಗಳಿಗೆ
ಉತ್ತಮತೆಯು ತಪ್ಪದೆನಲು
ಚಿತ್ರಿಸಿ ಪುತ್ಥಳಿಯಾಗಿ ಮುಕ್ತಿಯೊಳಿರ್ದ
ಚಿತ್ರ ಜಾತಿಯ ಬಣ್ಣಿಸುವೆನು ೮೮

ಶ್ರುತಿ:—

ಸರ್ವೇ ನಂದಂತಿ ಯಶಸಾಗತೇನ ಸಭಾ
ಸಾಹೇನ ಸಖ್ಯಾಸಖಾಯಃ
ಕಿಲ್ಬಿಷಃ ಸ್ಪೃಪ್ಪಿತುಫಣಿರ್ಹೇಷಾಮರಂ

ಪಿತರೋ ಭವತಿ ವಾಜಿನಾಯಃ
ರೃಚಾಂತ್ವಃ ಪೋಷಮಾಸ್ತೇ
ಪುಪುಷ್ವಾನ್ಗಾಯತ್ರಂತ್ವೋ ಗಾಯತಿ ಶಕ್ವರೀಷು
ಬ್ರಹ್ಮಾತ್ವೋವದತಿ ಜಾತವಿದ್ಯಾಂ
ಯಜ್ಞಸ್ಯ ಮಾತ್ರಾನ್ಮಿಮಿಮೀತ ಉತ್ವಃ

ರೂಪಕತಾಳ

ಯತ್ರ ಬ್ರಹ್ಮಾ ಯಜಮಾನ ಛಂದಸ್ಸು ಪಾದ
ನಿತ್ಯಾದಿ ವೇದ ವಚನವೆ
ಮುಕ್ತಿಯಲ್ಲಿಪ್ಪ ಬ್ರಹ್ಮಾದಿ ಜೀವರಾ
ವರ್ತನೆಯನು ವರ್ಣಿಸುತಿದಕೊ ೮೯

ಹರಿಪುರದೊಳಗಿಹ ಸಕಲ ಮುಕ್ತರುಗಳ
ಇರವ ಬಣ್ಣಿಸಿ ಪೊಗಳುವ
ಸರ್ವೇನಂದಂತಿ ಇತ್ಯಾದಿ ಶ್ರುತ್ಯರ್ಥವ
ಒರೆವೆನು ಕೇಳಿ ಸಜ್ಜನರು ೯೦

ಹೃದಯದ ಪಾಪವ ತೊಳೆವ ಅನ್ನವನೀವ
ಪದುಮನಾಭನು ಮುಕ್ತರುಗಳ
ಕುದುರೆಯಂತೆ ಕುಣಿವ ಕಣ್ಣಿಗೋಚರನಾಗಿ
ಒದಗಿ ಕೊಡುವ ಸುಖಂಗಳನು ೯೧

ಅಲ್ಲಲ್ಲೆ ಪಾಡುವ ಮುಕ್ತರ ಸಭೆಗಳ
ಉಲ್ಲಾಸ ತಾ ಕಂಡು ತಿಳಿವ
ಬಲ್ಲಿದ ಯಶವುಳ್ಳ ಹರಿಯೆಂಬ ಸಖೆಯಿಂದ
ಎಲ್ಲ ಮುಕ್ತರು ಸುಖಿಸುವರು ೯೨

ಒಬ್ಬ ಬ್ರಹ್ಮನು ಋಗ್ವೇದವ ಘೋಷಿಸುವ ಗಡ
ಒಬ್ಬ ಗಾಯಿತ್ರಿ ಸಾಮವನು
ಉಬ್ಬಿದ ಮನದಿಂದ ಗಾನವ ಮಾಡುವ ಮ
ತ್ತೊಬ್ಬ ಬ್ರಹ್ಮನು ಪುರಾಣಗಳ ೯೩

ಅಬ್ಜನಾಭನ ಪುರದಿ ಓದುತಿಪ್ಪನು ಗಡ
ಒಬ್ಬ ಶ್ರೀಹರಿ ಮೂರ್ತಿಯನ್ನು
ಉಬ್ಬರದಿ ನೆನೆದು ಸುಖಿಸುವನು ಗಡ
ಒಬ್ಬ ಬ್ರಹ್ಮನು ಸೋಮರಸವ ೯೪

ಅಬ್ಜನಾಭನಗ್ನ ಮುಖದಿ ಕೊಡುವ ಗಡ
ಒಬ್ಬ ಬ್ರಹ್ಮನು ಪೂಜಿಸುವನು
ಸರ್ವ ದೇವತೆಗಳು ಈ ಪರಿಯಲ್ಲಿ ಹರಿಯ
ಗರ್ಭವಾಸದಲ್ಲಿ ಇಹರು ೯೫

ಇಂತನಂತ ಬ್ರಹ್ಮಾದ್ಯರು ವೈಕುಂಠದಲಿ
ಅಂತರಂತರದಲಿಹರೆಂದು
ಮಂತ್ರಗಳು ಕೊಂಡಾಡುತಿವೆ ಆದರಿಂದ ಶ್ರೀ
ಕಾಂತನ್ನ ಮಹಿಮೆಗೇನೆಂಬೆ ೯೬

'ಮನೋಜವೇಷ್ವಾಸಾಮಾಬಭೂವ' ಎಂದು
ಚಿನುಮಯರಾದ ಮುಕ್ತರಿಗೂ
ಅನುಭವಿಸುವ ಆನಂದ ತಾರತಮ್ಯ
ವನು ಶ್ರುತಿ ತಾ ಪೇಳಿತಲ್ಲ ೯೭

ಆದರಿಂದ ಬೊಮ್ಮ ಪಟ್ಟದವರೆಲ್ಲರನು
ಮೊದಲಿಗೆ ನೆನೆದವರ ಹಿಂದ
ಪದವಿಯು ಬೇರೆ ಕೊಂಡಾಡಿತು ಶ್ರುತಿ ಮತ್ತು
ಉಳಿದವರ ನೊಂದಾಗಿ ತುತಿಸಿತು ೯೮

ಹುಯ್ಯರ ಮನೆಯ ವಾಲಗಶಾಲೆಗೈತಪ್ಪ
ವಿರಂಚ ರಾಶಿಗೆ ಲೆಕ್ಕವಿಲ್ಲ
ತೆರತೆರದಲಿಬಪ್ಪ ಗರುಡೇಂದ್ರ ಚಂದ್ರಾದಿ
ಸುರರ ತಿಂಥಿಣಿಯನೇನೆಂಬೆ ೯೯

ಪುಟ್ಟ ಮುನಿಯು ಪೊಟ್ಟೆ ಅಂಬುಧಿ ಜಲಕೆಂಬು
ಕೊಟ್ಟಿತೆನಲು ಸರ್ವೇಶ್ವರನ
ಪಟ್ಟದರಮನೆಯು ಚಾವಡಿ ಬಂದ ಬಂ
ದಷ್ಟು ಮುಕ್ತರಿಗೆ ತಾನಿಂಬುಕೊಡದೆ ೧೦೦

ಒಂದೊಂದು ಕಲ್ಪದಲಿ ಮುಕ್ತರಾದವರಾರು
ಚಂದಚಂದದಲಲ್ಲಲ್ಲಿಹರು
ಇಂದಿರೆಯೋಲಗದಿ ವಾಣಿ ಮೊದಲಾದ
ಇಂದುಮುಖಿಯರೊಪ್ಪುತಿಹರು ೧೦೧

ಅವರ ಲಾವಣ್ಯವ ಅವರ ತಾರುಣ್ಯವ
ಅವರುಟ್ಟ ಚಿತ್ರಾಂಬರವ
ಅವರ ಸರ್ವಾಂಗದ ದಿವ್ಯಾಭರಣಂಗಳ
ವಿವರವನಾವ ಬಣ್ಣಿಸುವ ೧೦೨

ಶ್ಲೋಕ:—

ಇದಂಜ್ಞಾನಮುಪಾಶ್ರಿತ್ಯಮಮಸಾಧರ್ಮ್ಯಮಾಗತಾಃ
ಸರ್ಗೇಪಿನೋಪಜಾಯಂತೇ ಪ್ರಳಯೇ ನವ್ಯಥಂಚಿತ
ಸರ್ವೇ ಚತುರ್ಬಾಹವ ಉನ್ಮಿಷನ್ಮಣಿಪ್ರವೇಕ ನಿಷ್ಕಾಭರಣಾಸ್ಸುವರ್ಚಸಃ
ಪ್ರವಾಳ ವೈಡೂರ್ಯ ಮೃಣಾಳ ವರ್ಚಸಾಂ ಪರಿಸ್ಫುರತ್ಕುಂಡಲ
ಮೌಳಿಮಾಲಿನಾಂ

ಝಂಪೆತಾಳ

ಇಟ್ಟ ಮಕುಟಂಗಳ ತೊಟ್ಟಂಗಿ ತೋಳ್ಗಳ
ಥಟ್ಟ ಸರ ಹಾರ ಪದಕಗಳ
ಉಟ್ಟ ಪೊಂಬಟ್ಟೆಗಳ ಕಂಕಣಾಂಗದಗಳ
ಮೆಟ್ಟಿರ್ದ ಪೊನ್ನ ಪಾವುಗೆಯು ೧೦೩

ಪೊಳೆವ ಕುಂಡಲಗಳು ಉಲಿವ ಕಿಂಕಿಣಿಗಳು
ನಳನಳಿಸುವ ನ್ಯಾವಳಗಳು
ನಲಿವ ಅಂದಿಗೆಗಳು ಮುಕ್ತರ ದಿವ್ಯಾಂಗ
ಚೆಲುವನದಾವ ವರ್ಣಿಸುವ ೧೦೪

ಕರ ಚತುಷ್ಟಯದ ಮುಕ್ತರು ಕೃಷ್ಣನೊಡನಲ್ಲಿ
ಸರಿ ಬೆರೆಸಿಹ ಸಮಯದಲಿ
ಉರದ ಸಿರಿವತ್ಸ ಕೌಸ್ತುಭದ ಕುರುಹು ಕಂಡು
ಹರಿಯಿವನೆಂದು ಅರಿವರು ಗಡ ೧೦೫

ವಿರಿಂಚಿ ಕೈಮುಗಿಯಲು ಗರುಡನೇರಿ ಬರಲು
ಉರಗನ ಮಂಚದೊಳಿರಲು
ಅರಿವರು ಅಲ್ಲದಿದ್ದೊಡೆ ಸಾರೂಪ್ಯದ ಮುಕ್ತಿ
ತೆರಪಡಿ ನೋಡಲರಿಯದು ಗಡ ೧೦೬

ಸಾಯುಜ್ಯ ಸಾಲೋಕ್ಯ ಸಾಮೀಪ್ಯ ಸಾರೂಪ್ಯ
ಈಯಂದ ಚತುರ್ವಿಧ ಮುಕ್ತಿ
ಹೇಯಲಿಂಗ ದೇಹ ಪೋದವೇಲವರವರ
ಸ್ವಯೋಗ್ಯತೆ ಯಿಂದೊಪ್ಪುವುದು ೧೦೭

ಶ್ರೀಕಾಂತನಂಗವ ಮುಟ್ಟಿಕೊಂಡಿಪ್ಪುದೆ
ಬೇಕಾದ ಸಾಯುಜ್ಯ ಮುಕ್ತಿ
ಈ ಕುಜನರೆಂಬೈಕ್ಯ ಯುಜುರ್ಯೋಗೆ ಎಂದೆಂಬ
ವ್ಯಾಕರಣೋಕ್ತಿಯ ಬಿಡಿಸಿತಲ್ಲ ೧೦೮

ಹರಿಯಂಗ ವಾಶ್ರೈಸಿ ಇಲ್ಲಿಪ್ಪ ದೇವರು
ಪರಗತಿಯಾದ ಮೇಲೆ ಮುಕ್ತಿಯೊಳು
ತೆರತೆರದಲ್ಲಿ ಹರಿಮೂರ್ತಿಯ ಲಿಹರಾಗೀ
ಪರಿಸುರರೇ ಸಾಯುಜ್ಯಾರ್ಹರು ೧೦೯

ಇದ್ದ ಮುಕ್ತಿಗಳಲ್ಲಿ ಭೇದ ಉಂಟೆಂಬುಗು
ಸಿದ್ಧ ಸಕಲವಾದಿಗಳಿಗು
ಶಬ್ದೋಕ್ತಿಯಿಂದಲಿ ಭೇದ ಬಂದಿತಾಗಿ
ಬಿದ್ದು ಹೋಯಿತು ಪರ ಸಿದ್ಧಾಂತವು ೧೧೦

ಸಾಲೋಕ್ಯ ಹರಿಲೋಕದೊಳಗೆ ತುಂಬಿಪ್ಪುದೆ
ಆ ಲೋಕ ದತ್ತಲಿಸುತ್ತ
ಪಾಲ ಸಾಗರದಲ್ಲಿ ಸುಖಿಸುವ ಜೀವರ
ಪಾಲಿಗೆ ಸಾಮೀಪ್ಯ ಕಾಣಿರೊ ೧೧೧

ಶ್ರೀ ವತ್ಸ ಕೌಸ್ತುಭ ಹೊರತಾಗಿ ಹರಿಯಂತೆ
ಆವಾಗ ಕರ ಚತುಷ್ಟಯದಿ
ಪಾವನ ಶಂಖ ಚಕ್ರಾದಿಗಳ ಧರಿಸಿಹ
ಜೀವರ್ಗೆ ಸಾರೂಪ್ಯ ಮುಕ್ತಿ ೧೧೨

ಸಾರೂಪ್ಯವೆಂಬೋದು ಸರ್ವರಿಗು ಸರಿ ಎಂದು
ಮೂರು ಮುಕ್ತಿಯಿಂದ ಹೊರಗೆ
ಸಾರೂಪ್ಯ ಮುಕುತೆಂದು ಹಿರಿಯರು ಕರೆವರು
ಬೇರೆ ಬೇರಾಗಿರುವುದು ಗಡ ೧೧೩

ಮೂರು ಶಾಕವ ಮಾಡಿ ಲವಣ ಕೂಡಿಸಿದರು
ಮೂರು ಶಾಕವು ಕರೆವರ್ಥೈಸೆ
ಬೇರೆ ಬಡಿಸಿದ ಲವಣ ಲವಣವೆಂದೆನಿಪುದು
ಈ ರೀತಿಯಹುದು ಸಾರೂಪ್ಯ ೧೧೪

ಶ್ರೀಲೋಲನಾಜ್ಞೆ ಈ ಸತ್ಯಲೋಕಗಳಲ್ಲಿ
ನೆಲೆಸಿದಾಥ ಮುಕುತರಿಗೆ
ಆಲಸ್ಯ ಹಸಿತೃಷೆ ಕಾಲಕರ್ಮವು ಕೋ
ಟಲೆಗಳು ತುಡುಕ ಲಮ್ಮವುಗಡ ೧೧೫

ಝಂಪೆತಾಳ

ದಿವ್ಯ ಭೋಗಂಗಳ ಲೀಲೆಯಿಂದುಂಬುವರು
ದಿವ್ಯ ಗೀತೆಗಳ ಪಾಡುವರು
ದಿವ್ಯ ಗಂಧಪರಿಮಳಂಗಳ ಪೂಸುವರು
ದಿವ್ಯ ನಾರೀನರರಲ್ಲಿ ೧೧೬

ಜ್ಯೋತಿರ್ಮಯದ ಹೆಣ್ಣು ಗಂಡುಗಳು ಅಪ್ರಾ
ಕೃತ ದೇಹಗಳಲ್ಲಿ ಇಹವು
ಪ್ರೀತಿಯಿಂದೊಮ್ಮೊಮ್ಮೆ ಅವರೊಳು ಪೊಕ್ಕು ನಾ
ನಾ ತೆರದಲಿ ಸುಖಿಸುವರು ೧೧೭

ಮುಕ್ತರ ಭೋಗಕ್ಕೆ ತಕ್ಕ ಫಲಂಗಳ
ಹೊತ್ತು ಹೊತ್ತಿಗೆ ಕೊಡುತಿಪ್ಪ
ನಿತ್ಯಾಪ್ರಕೃತವಾದ ಚಿತ್ರವೃಕ್ಷಗಳಲ್ಲಿ
ಸುತ್ತ ಮುತ್ತಲೊಪ್ಪುತಿಹವು ೧೧೮

ನಿತ್ಯ ನಿರ್ದುಃಖ ಸುಖ ಸ್ವರೂಪರಾಗಿ
ಸುತ್ತುವಳಿವರು ಲೀಲೆಯಲ್ಲಿ
ನಿತ್ಯ ಫಲಂಗಳವರ್ಗೆ ಸುಖವನಿತ್ತು
ಮತ್ತೆ ಮುನ್ನಿದ್ದಲ್ಲೆ ಇಹವು ೧೧೯

ಇದು ಚಿತ್ರವಲ್ಲ ತುಂಡಿಸಿ ಶಾಖಂಗಳ ಮಾಡಿ
ಕುದಿಸಿ ವಿಪ್ರರ್ಗೆ ಉಣ್ಣಿಸಿಗ
ಚದುರ ವಾತಾಪಿ ತಮ್ಮಣ್ಣ ಕರೆದಾಗಲೆ
ಮೊದಲಿನಂತೆ ಬಾಹ ಕಂಡ್ಯ ೧೨೦

ಶ್ಲೋಕ:—

ಭ್ರಾಜಿಷ್ಣುಭಿರ್ಯಃ ಭಜಿತೋ ವಿರಾಜತೆ
ಲಸದ್ವಿಮಾನಾವಳಿಭಿರ್ಮಹಾತ್ಮನಾಂ
ವಿದ್ಯೋತಮಾನ ಪ್ರಮದೋತ್ತಮಾಭಿಃ
ಸವಿದ್ಯುದಭ್ರಾವಳಿಭಿರ್ಯಥಾ ನಭಃ

ಪದ ರೂಪಕತಾಳ

ಒಪ್ಪುವ ವಿಮಾನ ವೇರಿ ಮೆರೆವ ಕಂ
ದರ್ಪನ ಕೇಳಿಯಲ್ಲಿಹರು
ತಪ್ಪರು ಧರ್ಮಮಾರ್ಗವನು ಅಧರ್ಮತೊಲ
ಗಿಪ್ಪುದು ಅವರ ಸ್ವಭಾವ ೧೨೧

ಚಿತ್ರದಿ ಬರೆದ ಹೆಣ್ಣು ಗಂಡಂತೆ ಅ
ನ್ಯ ಸ್ತ್ರೀಯರಲ್ಲಿ ಆವಮುಕ್ತರಿಗೆ
ಚಿತ್ತವೆರಗದು ತಮತಮ್ಮ ಸ್ತ್ರೀಯರಲ್ಲಿ
ಅರ್ಥಿಯ ಮಾಡುವರ್ಹೈಸೆ ೧೨೨

ತಾಯ ಸೊಬಗ ಕಂಡಕಂಡಾಗ ಮಕ್ಕಳು
ನ್ಯಾಯ ಪಥವನು ಬಿಡುವರೆ
ಶ್ರೀಯಿಂದ ಮಿಂಚುವ ಮಗಳ ಕಂಡರೆ ಪಿತ
ಕಾಯಜ ಶರಕೊಳಗಾಗುವನೆ ೧೨೩

ಚೆಲುವ ತಂಗಿಯ ಕಂಡ ಒಡಹುಟ್ಟಿದರಮನ
ವಳುಕುವುದೆ ಪಾಪ ಫಲಕೆ
ಕಲಿಗೊಳಗಾದವರಿಗೀ ಮಾರ್ಗವಿರೆ ನಿ
ರ್ಮಲ ಮುಕ್ತರಿಗೆ ದ್ರೋಹ ಬಹುದೆ ? ೧೨೪

ಶ್ಲೋಕ:—

ಆನಂದಾನ್ಮಂದ ಮಂದಾ ದದತಿ ಹಿ ಮರುತಃ
ಕುಂದಮಂದಾರ ನಂದ್ಯಾವರ್ತಾಮೋದಾನ್ದಧಾನಾ
ಮೃದುಪದ ಮುದಿತೋದ್ಗೀತಕೈ ಸ್ಸುಂದರೀಣಾಂ ||
ವಂದ್ಯೈರಾವಂದ್ಯ ಮುಕ್ತೋಂದ್ವಹಿ ಮಗುಮದನಾ
ಹೀಂದ್ರ ದೇವೇಂದ್ರ ಸೇವ್ಯೇ ಮೌಕುಂದೇ
ಮಂದಿರೇಸ್ಮಿ ನ್ನವಿರತ ಮುದಯಸ್ಮೋವಿನಾಂ ದೇವದೇವ ||

ಅಟತಾಳ

ಕುಂದ ಮಂದಾರ ಮಲ್ಲಿಗೆ ನಂದಾವರ್ತದ
ವಿಂದದಲ್ಲೆಸೆವ ಸೌರಭದ
ಗಂಧ ವಾಹನನಲ್ಲಿ ಬೀಸುವ ಮುಕ್ತರಾ
ನಂದಕ್ಕೆ ನಿತ್ಯ ಸುಖವೀವ ೧೨೫

ಚಂದನದ ರಸ ಪೂಸಿದ ಮೈಯೊಳು
ಹೊಂದಿದ ಮೋದ ಶೈತ್ಯವನೆ
ಮಂದ ಮಾರುತ ಬಂದು ವ್ಯಕ್ತ ಮಾಡಿಸುವದ
ರಿಂದ ಮುಕ್ತರ ಭೋಗಗಳಿಗೆ ೧೨೬

ಮತ್ತ ನರ್ತನದಂತೆ ಶಕ್ತ ನೃಪಾಲಗೆ
ಭೃತ್ಯನ ಕೈಲಾಗಿನಂತೆ
ಮುಕ್ತರ ಭೋಗಂಗಳಪ್ಪವು ಹರಿಯಲ್ಲಿ
ಚಿತ್ರ ಚಾರಿತ್ರ ಲೀಲೆಗಳು ೧೨೭

ನಿತ್ಯ ತೃಪ್ತನು ಕೃತಕೃತ್ಯನಚ್ಯುತ ಗಡ
ಮುಕ್ತರೆಲ್ಲಾಪ್ತ ಕಾಮರು ಗಡ
ಇತ್ತ ಇವರಾಟನ ಅತ್ತ ಶ್ರುತಿಪಾಠವ
ವ್ಯರ್ಥ ಮಾಡದವ ಜಾಣ ೧೨೮

ಅದರಿಂದ ತಮ್ಮ ನಿತ್ಯಾನಂದ ತಪದಿಂ
ತೊಡಗಿದ ವಿಷಯ ರಾಶಿಗಳ
ಮದನನೈಯನ ಪುರದೊಳಗಿದ್ದ ಮುಕ್ತರು
ಮುದದಿಂದ ಸೇವಿಪರೈಸೆ ೧೨೯

ರಾಗ ಕೇತಾರಗೌಳ ರೂಪಕತಾಳ

ಅರವೊಂದಣ್ಯಾವೊಂದು (?) ಅಲ್ಲಿ ಸುಗಸಾ
ಗರ ವೆರಡೆಂದಿಪ್ಪುವು ಗಡ
ಸರಸ ಲೀಲೆಯಿಂದ ಆದರ ರಸವನು ಮು
ಕ್ತರು ಬಂದಾಸ್ವಾದಿಸುವರು ಗಡ ೧೩೦

ಒಂದು ಅಶ್ವತ್ಥವು ಚೆಂದದಮೃತರಸ
ವೆಂದೆಂದು ಕರೆವುತಿಪ್ಪುದು ಗಡ
ಒಂದದನೊಮ್ಮೊಮ್ಮೆ ಮುಕುತರು ತಮ್ಮ ಮನ
ಬಂದಂತಾಸ್ವಾದಿಸುವರು ಗಡ ೧೩೧

ಶುದ್ಧ ಪ್ರಾಕೃತವಾದ ಷಡ್ವಿಧ ರಸವುಳ್ಳ
ಸ್ವಾದ್ವನ್ನಗಳ ಕೊಡುತಿಪ್ಪ
ಹೃದ್ಯ ನದಿಗಳು ಸುತ್ತ ಪರಿವುವು
ಪದ್ಮನಾಭನ ಪುರದೊಳಗೆ ೧೩೨

ಸರ್ಪಿ ಪಾಯಸವೆಂಬ ಕರ್ದಮಂಗಳ ಕೂಡಿ
ಒಪ್ಪುವ ಭಕ್ಷ್ಯ ಭೋಜ್ಯಗಳ
ತೋರ್ಪ ಅಮೃತ ನದಿಗಳಲ್ಲಿ ಪರಿವುದ
ನೊಪ್ಪುಗೊಂಬರು ಲೀಲೆಯಿಂದ ೧೩೩

ವಾಪೀ ಕೂಪ ತಟಾಕಂಗಳಿಹವು ನಾ
ನಾ ಫಲವೆರಸಿ ತರುಗಳು
ತೋಪುಗಳಲ್ಲಿ ಒಮ್ಮೊಮ್ಮೆ ಇವರು ನಾ
ನಾಪರಿ ಕ್ರೀಡೆಯಾಡುವರು ೧೩೪

ನಿತ್ಯ ಪ್ರಾಕೃತವಾದ ಚತುರ ವಿಧನ್ನಗಳಿಂ
ತುತ್ತ ನೊಮ್ಮೊಮ್ಮೆ ಸೇವಿಪರು
ಸತ್ತಿಗೆ ಪಿಡಿವರು ಚಾಮರಂಗಳಲ್ಲಿ
ಭೃತ್ಯರವರಿಗೆ ಬೀಸುವರು ೧೩೫

ಮಕ್ಕಳೆತ್ತಿಕೊಂಬ ತಾಯಿ ಸುಖದಿಂದ
ಉಕ್ಕುವಂತಲ್ಲಿ ಸೇವಿಪರ
ಭಕ್ತಿ ಭರಿತ ಚಿತ್ತ ಉಬ್ಬಿ ಕೊಬ್ಬಿದರೆ ಸೌ
ಖ್ಯಾಬ್ಧಿಯು ತುಳುಕುವುದ್ಯೆಸೆ ೧೩೬

ಪಾಲುಂಬ ಸವಿಗಿಂದ ಸಕ್ಕರೆಗೂಡಿದ
ಪಾಲುಕುಡಿವ ಸುಖ ಮೇಲು
ಲೋಲಾಕ್ಷಿಯರಸೋಳ್ಪ ಸುಖಕಿಂದವರಂಗದ
ಆ ಲಿಂಗನದ ಸುಖಮೇಲು ೧೩೭

ಇಂತು ಮಹಂತರ ಸುಖಮೇಲು ಮುಕ್ತಿಯೊ
ಳಂತರಂತರದಿ ಸೇವಿಪರ
ಸಂತೋಷ ತಾರತಮ್ಯದಲಿಪ್ಪುದೆಂದು ವೇ
ದಾಂತದಿ ಹಯವದನ ನೊರೆದ ೧೩೮

ವೈಕುಂಠವೆಂದೆಂಬ ತನ್ನ ಪುರಕಥೆಯ ಪ
ರಾಕವ ಬಿಟ್ಟು ಕೇಳುವರ
ಶ್ರೀಕಾಂತ ಕಾವನೆಂಬಲ್ಲಿ ಮೊದಲ ಸಂಧಿ
ಈ ಕಾವ್ಯದೊಳಗೆ ಮುಗಿಯಿತು ೧೩೯

ಶ್ರೀಧರ ಹಯವದನ ರಾಯನ ದಯದಿಂದ
ವಾದಿರಾಜೇಂದ್ರ ರಚಿಸಿದ
ಈ ದಿವ್ಯ ಕಾವ್ಯದಿ ಮುಕ್ತಿಯೊರೆವ ರಮ್ಯ
ವಾದ ಮೊದಲಸಂಧಿ ಪೊಸಬಗೆ ೧೪೦

**ಶ್ರೀ ವೈಕುಂಠ ವರ್ಣನೆಯೊಳು ಮೊದಲ ಸಂಧಿ**

**ಸಮಾಪ್ತವಾದುದು**

**ಶ್ರೀ ಕೃಷ್ಣಾರ್ಪಣಮಸ್ತು**



# ಶ್ರೀ ವೈಕುಂಠ ವರ್ಣನೆ

## ಎರಡನೆಯ ಸಂಧಿ

ಇದು ಪುಣ್ಯಕಥೆ ಲೋಕಕ್ಕಿದೆ ಮುಕುತಿಯ ಪಥ
ಇದ ಕೇಳುವವನೆ ಕೃತಾರ್ಥ
ಇದು ಸರ್ವಸಾಧನ ವಿಧುಗಳಿಗೆ ಸಮ್ಮತ
ಮುದವ ನೀವುದು ಕೇಳ್ವ ಜನಕೆ ೧

ಶ್ಲೋಕ:—

ಸ ಏವ ಭೂಯೋ ನಿಜವೀರ್ಯ ಚೋದಿತಾಂ
ಸ್ವಜೀವ ಮಾಯಾಂ ಪ್ರಕೃತಿಂ ಸಿಸೃಕ್ಷತೀಮ್
ಅನಾಮ ರೂಪಾತ್ಮನಿ ರೂಪನಾಮನೀ
ವಿಧಿತ್ಸಮಾನೋ ಽ ನುಸಸಾರ ಶಾಸ್ತ್ರಕೃತ್

ಪದ ರೂಪಕತಾಳ

ಜೀವರ ದೇಹ ರೂಪದಿಂದ ಕಟ್ಟಿತಾಗಿ
ಜೀವ ಮಾಯೆಗಡ ಪ್ರಕೃತಿ
ದೇವನು ನಿಜ ಶಕ್ತಿಯಿಂದ ಕರದ ತಂ
ತುವಿನಂತಿದರ್ನ ನಡೆಸುವ ಗಡ ೨

ಸೃಷ್ಟಿಸಿ ನರೇಯಣ ಬೊಮ್ಮಾದಿಗಳ ಉ
ತ್ಕೃಷ್ಟ ಸತ್ಯಾದಿ ಲೋಕದಲಿ
ಪಟ್ಟವ ಕಟ್ಟಿಸಿ ಸಕಲರಿಗಿಷ್ಟವ
ಕೊಟ್ಟು ಪಾಲಿಸಿದ ಲೀಲೆಯಲಿ ೩

ಛತ್ರರ ಪೊರೆದ ದೈತ್ಯರ ಮುರಿದ ಸ
ರ್ವತ್ರ ಶ್ರುತಿಪಥವ ಸೊರೆದ
ಹಸ್ತೀಂದ್ರ ವರದ ದುರಿತರಾಶಿಯ ತರಿದ
ಕೀರ್ತಿಯ ಮೆರೆದಿಷ್ಟಗರೆದ ೪

ಅವತರಿಸಿ ಭೂಮಿಯ ಭಾರವ ನಿಳುಹಿದ
ಭುವನ ಪಾವನ ಪುಣ್ಯ ಚರಿತ
ತವೆಯಾದ ಸುಲಿಗಳ ? ತನ್ನವರಿಗೆ ಕೊಟ್ಟು
ಜವನ ಬಾಧೆಯ ಬಿಡಿಸಿದ ೫

ಹಳಿಯಂಗಿಗಳ ಕಳೆದು ಚೆಲುವ ಚಿತ್ರಾಂಬರದ
ಪೊಳೆವಂಗಿಗಳ ತೊಡುವಂತೆ
ಜಲಜಾಕ್ಷ ಮಾಡುವ ಲಯದ ಲೀಲೆಯ ಮುಕ್ತಿ
ಫಲವೀವುದದರಿಂದ ತುತಿಪೆ ೬

ಜಗವ ಪಾಲಿಸಿ ಮತ್ತೀಜಗವ ಸೃಜಿಪರ್ಗೆ
ಬಗೆಬಗೆ ಗತಿಗಳ ಕೊಡಲು
ಮಗನ ನೂರು ವರುಷ ಮುಗಿಯಲು ಮುನಿದಂತೆ
ಭಗವಾನ್ಲಯಕೆ ಮನವಿತ್ತ ೭

ಶ್ಲೋಕ:—

ನಷ್ಟೇಲೋಕೇ ದ್ವಿಪರಾರ್ಧಾವಸಾನೇ
ಮಹಾ ಭೂತೇಷ್ವಧಿ ಭೂತಂಗತೇಷು
ವ್ಯಕ್ತೇ ಽ ವ್ಯಕ್ತಂ ಕಾಲವೇಗೇನ ನೀತೇ
ಭವಾನೇಕಃ ಶಿಷ್ಯತೇ ಽ ಶೇಷ ಸಂಜ್ಞಃ

ಪದ ರೂಪಕತಾಳ

ಪಾತಾಳ ಮೊದಲಾದ ಲೋಕವ ಪ್ರಳಯದಿ
ವಾತ ಸಖನಿಂದಲಿ ಸುಡಿಸಿ

ಭೂತಪಂಚಕ ಮೊದಲಾದ ತತ್ವಂಗಳ ಶ್ರೀ
ನಾಥ ಸಂಹರಿಸಿ ದಾಕ್ಷಣವಿ ೮

ಮೂರು ಗುಣಂಗಳ ಮೂಲ ಪ್ರಕೃತಿಯಲ್ಲಿ
ಸೇರಿಸಿ ಸರ್ವ ಜೀವರನು
ಕಾರಣ ಪುರುಷ ತನ್ನ ಕುಕ್ಷಿಯೊಳಿಟ್ಟು
ಶ್ರೀ ರಮಣಿಗೆ ಸುಖವಿತ್ತ ೯

ಆತ್ತ ಮಹತ್ತತ್ವವಾಳ್ದ ದೇಹವಿರಲು
ಚಿತ್ತ ಜೀವರ ಮೊತ್ತಗಳನು
ಹೊತ್ತಿಹ ಸತ್ಯ ಲೋಕದ ಬ್ರಹ್ಮ ವಿರಜೆಯು
ತೀರ್ಥಸ್ನಾನಕೆ ಸಲ್ವಸಲ್ಲಿ ೧೦

ಅದರಿಂದ ಇಪ್ಪತ್ತು ಮೂರು ತತ್ವಂಗಳ
ಅಧಿಪತಿಗಳ ಕೂಡಿಕೊಂಡು
ಮೊದಲ ತತ್ವವ ತನ್ನ ಮೂಲರೂಪದಿ ಕೂಡಿ
ಮದನನೈಯಗೆ ತುತ್ತನಾದ ೧೧

ಹಿಂದೆ ಬ್ರಹ್ಮನ ಸೃಜಿಸಿ ಅವನಂಗವನಾಗಲೆ
ತಿಂದರೆ ತುತ್ತು ಕುಂದುವುದು
ಎಂದುದಾಸೀನವ ಮಾಡಿದ ಶ್ರೀಕೃಷ್ಣ
ಇಂದು ಭುಂಜಿಸಿ ತೇಗುತಿರ್ದ ೧೨

ಸಪ್ತ ದ್ವೀಪಗಳಲ್ಲಿ ಸುತ್ತು ಮುತ್ತಲಿಪ್ಪ
ಭಕ್ತ ರಾಶಿಗೆ ಗಣನೆಯಿಲ್ಲ
ಅರ್ಥಿಯ ಭಿಕ್ಷುಕ್ಕೆ ತಕ್ಕ ಧಾನ್ಯಂಗಳ
ಮೊತ್ತ ಪರ್ವತದಂತಿತ್ತು ೧೩

ನಾನಾ ಫಲಂಗಳು ನಾನಾ ಪಕ್ವಾನ್ನಗಳು
ನಾನಾ ವಿಧದ ಶಾಕಂಗಳು
ನಾನಾ ಕಂದ ಮೂಲಗಳು ಶ್ರೀಕೃಷ್ಣನ
ಆನಂದಕ್ಕಂದೊದಗಿದವು ೧೪

ಶ್ರುತಿ:—

ಯಸ್ಯ ಬ್ರಹ್ಮಂಚ ಕ್ಷತ್ರಂ ಚೋಭೇ ಭವತಿ ಓದನಃ
ಮೃತ್ಯುರ್ಯಸ್ಯೋಪಸೇಚನಂ ಕ್ವಇತ್ಥಾವೇದಯತ್ರಸಃ

ಪದ ಧ್ರುವತಾಳ

ಹಸಿತಲೆಯು ಮೃತ್ಯುವೆ ಅಡಿಗಡಿಗೆ ತುಪ್ಪವಾ
ಕೂಡೆಯುಲೊಂದೊಂದೆಂಬೋದೆ ತುತ್ತುಗಳು ಅದುವೆ
ಜಡತನವಿಲ್ಲದ ಜಗದೊಡೆಯನಿಗೆಂತು ಮಾ
ರೆಡೆ ಬಡಿಸಿದಂತೆ ಭುಂಜಿಸುವ ಗಡ ೧೪

ಮಧು ಕೈಟಭರೆಂಬ ಕೊಬ್ಬಿದ ದಾನವರ ಮೈಯೊಳು
ಹುದುಗಿಪ್ಪ ರೂಪ ರಸ ಗಂಧ ಭರಿತ
ಮುದದಿಂದ ಮಾಡಿದ ಈ ಮೇದಿನಿ ಶ್ರೀಧರಗೆ
ಸ್ವಾದುವಾದ ಮಾಂಸದೊಳು ಮೊದಲಾಯಿತು ೧೬

ಪಳುಕೋಟಿ ಯೋಜನದ ಪ್ರಮಾಣ ಬೆಳೆದು ತ
ನ್ನೊಳಗೆ ನಾನಾ ವಿಧ ಪ್ರಾಣಿಗಳ ತುಂಬಿರ್ದ
ಕಲಿಮಲ ಕಳೆವ ಈ ಇಳೆಯು ನಮ್ಮಚ್ಯುತಗೆ
ಪೊಳೆವ ಪುಣ್ಯಾಮಿಷವಾಯಿತು ಕಾಣಿರೊ ೧೭

ದೇವ ಪೂರ್ವ ದೇವ ಉಪದೇವ ಭೂಮಿದೇವ ಧನ
ವೀವ ರಾಯ ದೇವ ಮೊದಲಾದ ಜೀವರ
ಪಾವನವಾದ ವ್ಯಾಧಿಯಿಲ್ಲದ ಈ ದೇಹಗಳೆ
ಭಾವನೆ ಕೊಟ್ಟಂತೆ ಭವ್ಯಾಮಿಷವಾಯಿತು ೧೮

ಝಂಪೆತಾಳ

ಏಳು ಸಾಗರದೊಳು ತುಂಬಿರ್ದ ಜಲಚರ
ಜಾಲಂಗಳಿಗೆ ಲೆಕ್ಕವಿಲ್ಲ

ಸಾಲಾಗಿ ವನವನದಿ ಸಂಚರಿಸುವ ವ್ಯಗ
ವ್ಯಾಳೋರಗಗಳ ಬಣ್ಣಿಪೆನು ೧೯

ಆದಿಪುರುಷ ನಿಂತು ತನ್ನ ಭೋಜನಕ್ಕೆ
ಸಾಧನವಾದ ದ್ರವ್ಯಗಳ
ಶ್ರೀದೇವಿ ತಾನೆ ಸ್ವಯಂ ಪಾಕಿಯುಳಂತೆ
ಆ ಲಯ ಜ್ವಾಲೆ ಕಿಚ್ಚಿನಲಿ ೨೦

ಲವಣೇಕ್ಷು ಮಧು ಸರ್ಪಿ ದಧಿ ಕ್ಷೀರಗಳ ರ
ಸವ ಕೂಡಿ ಹೈಮಾಂಡವೆಂಬ
ತವೆಯಾದ ಭಾಂಡದೊಳಿಟ್ಟು ಪಾಕವಮಾಡಿ
ತವಕದಿಂದೊಂದು ತುತ್ತಾಗಿ ೨೧

ಭುವನ ವ್ಯಾಪ್ತವಾದ ಸ್ಥೂಲದೇಹದ ಭಯ
ವಿವರವ ತೆಗೆದು ಭುಂಜಿಸಿದ
ಪವನ ತನ್ನೈಯನುಂಬ ಸಂಭ್ರಮಕೆ ವ್ಯೈ
ಬಿವರದಂತಡಿಗಡಿಗೆ ಬೀಸೆ ೨೨

ಸವ ಶುದ್ಧದಾರ್ಣವ ಜಲವೆಂಬ ತಪಸೀ
ಯವ ಕೊಂಡಾಚಮನವಮಾಡಿ
ಇವು ಜೀರ್ಣ ಬಪ್ಪಂತೆ ಸ್ವರ್ಣ ಭಾಂಡವನೆ ಭ
ಸ್ಮವಮಾಡಿ ಮತ್ತೆ ಸೇವಿಸಿದ ೨೩

ಕುದಿವ ಬಾಹ್ಯೋದಕವೆಂಬ ಕಷಾಯವ
ಮುದದಿಂದ ಕೊಂಡು ತೇಗುತಲಿ
ಪದುಮೆಯೊಡನೆ ಇನ್ನು ಪವಡಿಸಬೇಕೆಂದು
ಬುಧವಂದ್ಯನಂದು ಬಯಸಿದ ೨೪

ಒಂದೊಂದು ನಿಮಿಷಕೀ ಯಂದದುಂಡು ತೇಗಿ
ಯೆಂದಿನಂತಿಪ್ಪ ಮುಕುಂದ ನೆತ್ತ
ಒಂದಿಷ್ಟನ್ನಧಿಕವಾದರೆ ನೊಂದು ತಲೆಸುತ್ತಿ
ದಂದುಗಬಡುವ ಜೀವ ವೃಂದವೆತ್ತ ೨೫

ಒಂದು ಗುಣಕೆ ಲೆಕ್ಕವಿಲ್ಲೆಂಬ ಮಹಿಮೆ ಬಲು
ಚೆಂದವಾಯಿತು ಇಂದಿರೆಯುರಸನಲ್ಲಿ
ಹಿಂದೆ ಇಂದು ಮುಂದನಂತ ಕಾಲವಿ ಸೃಷ್ಟಿಪ
ಒಂದೇ ಗುಣ ಕ್ರಿಯಾನಂತವಲ್ಲವೆ ೬೭

ಆದಿತಾಳ

ಇದೇ ರೀತಿ ರಕ್ಷಕತ್ವ ಶಿಕ್ಷಕತ್ವ ಮೋಕ್ಷಪದ ದಾತೃ
ತ್ವಾದಿ ಗುಣಗಣ ವೊಂದೊಂದು
ಪದುಮನಾಭನಲ್ಲಿ ಅನಂತನ ತನಗೊಂದು
ಅದುಭುತವಲ್ಲವೆ ನಮ್ಮ ಇನಿಯ ನಾಟ
ಬಿಳರೆದೆಸು ಗೂಟ-ಇವನಮಾಡುವ ಮಾಟ ೬೭

ರೂಪಕತಾಳ

ಒಪ್ಪುವಂಗಗಳೊಳು ತೋಂಪ ಸುರರ ಪಿಂಡು
ತಪ್ಪಿಸಿ ರಮೆಯೆಂತಪ್ಪುವಳೊ
ಕಪ್ಪುರದ ಕರಡಿಗೆಯಂತಿಪ್ಪ ಬಾಯೊಳು ತ
ನ್ನೊಪ್ಪುವಿಗೆಂತು ಚುಂಬಿಪಳೊ ೬೮

ಅದರಿಂದ ತನ್ನ ವ್ಯೂಯೊಳಗಿದ್ದ ಜೀವರ
ಉದರದೊಳಗೆ ಬಚ್ಚಿಟ್ಟು
ಉದಧಿ ಕನ್ನಿಕೆ ತನ್ನ ರತಿಗನುವಾಗೆಸೆ
ಹದ ಬಗೆಗೆ ಮನದೊಳುಬ್ಬಿದಳು ೬೯

ಸರಸಿಜಾಸನನಂದು ವೈಕುಂಠದೊಳಗಿದ್ದ
ವಿರಜೆಯೊಳು ಮುಕ್ತಿ ಯೋಗ್ಯರನ
ಕರೆಸಿಕೊಂಡು ಬಂದು ಮಿಂದು ಮುಕ್ತನಾಗಿ
ಶ್ರೀಹರಿಯುದರವ ಬೇಗ ಪೊಕ್ಕ ೭೦

ತೆರತೆರದಿ ಮಿಂಚುವ ತಮ್ಮ ದೇಹಂಗಳ
ಸಿರಿಪಸರಿಸೆ ಸಿರಿಧರನ
ಪುರ ಮೂರರೊಳಗಿರ್ದ ಪೂರ್ವ ಮುಕ್ತರು ಬಂದು
ಹರಿಯುದರವ ಪೊಕ್ಕರಾಗ ೩೧

ಎಲ್ಲ ಜೀವರ ತನ್ನ ಪೊಟ್ಟೆಯೊಳಿಟ್ಟು ಸಿರಿ
ಯೊಲ್ಲಭ ನಿದ್ರೆಗೊಳಿಸಿದ
ಸಲ್ಲೀಲೆಯಿಂದಲಿ ಸತಿಯೊಡನಾಡುವ
ಉಲ್ಲಾಸಗಳ ಕಾಣದಂತೆ ೩೨

ಇಂತು ಮುಕ್ತಾಮುಕ್ತ ಜೀವರ ತಿಂಥಿಣಿಸು
ನಾಂತ ಶ್ರೀಕಾಂತ ಪವಡಿಸಿ
ಕಾಂತೆಯರೊಡನೆ ಸಂತೋಷದಲಿಹ ಕಥೆ
ಸಂತತ ನಮ್ಮ ಸಲಹಲಿ ೩೩

ಶ್ಲೋಕ:—

ಶ್ರೀರೇವ ಲೋಕರೂಪೇಣ ವಿಷ್ಣೋಃಸ್ತಿಷ್ಠತಿ ಸರ್ವದಾ
ಅತೋಹಿ ವೈಷ್ಣವಾಲೋಕಾಃ ನಿತ್ಯಾಸ್ತೇ ಚೇತನಾ ಅಪಿ

ರೂಪಕತಾಳ

ಶ್ರೀದೇವಿ ತಾನೆ ತ್ರಿಧಾಮ ನಾಮಕಿಯಾಗಿ
ಆದಿ ಅಂತ್ಯಗಳಿಲ್ಲದಂತೆ
ಬೋಧ ಸುಖರೂಪದೊಳಿಹಳೆಂದು ಪೂರ್ವದಾ
ವೇದವಾದಿಗಳೋದುತಿಹರು ೩೪

ಆದರಿಂದ ಹರಿಯ ಮೂಲೋಕಂಗಳಿಗೆ ಲ
ಯದ ಕಿಚ್ಚಿಂದ ಕೇಡಿಲ್ಲ
ಪೊದಲೋದಕಗಳೆಲ್ಲ ಪೋದಕಾರಣ ಲಕ್ಷ್ಮಿ
ಉದಧಿಯಾದಳಚ್ಯುತಂಗೆ ೩೫

ಶ್ಲೋಕ:—

ಸಲಿಲಂ ಶ್ರೀ ಪ್ರಕೃತ್ಯಾಖ್ಯಂ ತದಾ ಸೀತ್ಕಿಲ ಕೇವಲಂ
ಅಂಭಸ್ತು ಹೇತಸಾನ್ಯೇತಿ ಶ್ರುತ್ಯರ್ಥ ಮುದದರ್ಶಯಾತ್
ಯುಷ್ಯೈಕಾತ್ಮ್ಯಾನು ಭಾವೇನ ವಿಕಲ್ಪ ರಹಿತಃ ಸ್ವಯಂ
ಭೂಷಣಾಯುಧ ಲಿಂಗಾಖ್ಯ ಧತ್ತೇ ಶಕ್ತೀಃ ಸ್ವಮಾಯಯಾ

ಅಟತಾಳ

ಭೂಲಕ್ಷ್ಮಿ ದುರ್ಗೇರ ಲಾಲಿಸುತಿಹರೆ ಹರಿ
ಆಲದೆಲೆಯ ಮೇಲೆ ಮಲಗಿದ
ತ್ರಿಲಯಾಂಬುಧಿಯ ಕಲ್ಲೋಲ ಉದಕದಲ್ಲು
ಯ್ಯಾಲೆಯಾಡಿದ ನಾಗ ಲೀಲೆಯಲಿ ೩೬

ಒಮ್ಮೆ ಭೂಮಿಯುಹಳೊಮ್ಮೆ ದುರ್ಗಿಯುಹ
ಳೊಮ್ಮೆ ಶ್ರೀದೇವಿಯಾಗಿಹಳು
ಇನ್ನ್ಯಾರೊಮ್ಮೆ ಪತಿಯಪ್ಪಲು ಸುಖಿಪ
ಚಿನ್ಮಯಳರ್ಥಿಯ ನೇಸೆಂಬೆ ೩೭

ರೂಪಕತಾಳ

ಅವಳಪ್ಪಿಕೊಂಬಾಗ ಹರಿಯ ವಕ್ಷದ ಗಂಧ
ಇವಳುರದಲ್ಲಿ ತೋರುತಿಹುದು
ಇವಳ ಚುಂಬಿಸುವಾಗ ಪತಿಯದಂತದ ಘಾಯ
ಅವಳಧರದಲೊಪ್ಪುತಿಹುದು ೩೮

ಅಚ್ಯುತ ಸುದರದಿ ಲಿಂಗದೇಹದ ಕಣ್ಣು
ಮುಚ್ಚಿ ಜೀವರು ನಿದ್ರೈಗೈಯೆ
ಎಚ್ಚತ್ತಿಹನು ಗಡ ಮುಖ್ಯಪ್ರಾಣನು ಒಬ್ಬ
ಸ್ವಚ್ಛ ಚಿತ್ತ ಮುಕ್ತರೊಳಗೆ ೩೯

ಪ್ರಳಯೇಪಿ ಅವಿಮುಕ್ತ ಬಾಹ್ಯ ಜ್ಞಾನಸೆಂದಾ
ಖಿಳರೊಳು ಮುಖ್ಯ ಮಾರುತನ
ಸೆಲೆಯರಿತು ವಾಯುರ್ವಾವಾನಿತ್ಯ ಎಂಬ ಸಿ
ರ್ಮಳ ಶ್ರುತಿ ಗರ್ಜಿಸುತ್ತಿದಕೊ ೪೦

ದೇಹಿ ನಿದ್ರಿತನಾಗೆ ಆವನ ದೇಹದೊಳಿಹ
ದೇವರು ನಿದ್ರೆಯ ಬಡರು
ಹೋಹ ಬಾಹ ಶ್ವಾಸಂಗಳಾಗ ನಡೆಸುವ
ನೀ ಹದ ಲಯದ ಕಾಲದಲಿ ೪೧

ಶ್ಲೋಕ: --

ಲಯಸ್ಯಾಪ್ಯಷ್ಟಮೇ ಭಾಗೇ ಸೃಷ್ಟಿಕಾಲ ಉದಾಹೃತಃ
ತತ್ರೈವ ವೇದ ಸಂಚಾರೋ ಹ್ಯನ್ಯಥಾ ವಿಷ್ಣು ಬುದ್ಧಿಗಾ

ಆದಿತಾಳ

ಬೊಮ್ಮನ್ನ ನೂರುವರುಷ ಪ್ರಳಯದ ಮಾಸು
ತನ್ಮಧ್ಯೆ ಎಂಭತ್ತೇಳ್ವರೆ ಅಬ್ದ
ಸುಮ್ಮನೆ ಹೋಹುದು ಆದರ ತುದಿಯಲ್ಲಿ
ನಮ್ಮ ದುರ್ಗಮ್ಮಗೆಚ್ಚರಿಕೆ ೪೨

ಶ್ಲೋಕ:—

ಸ್ವಸೃಷ್ಟಮಿದಮಾಪೀಯ್ಯ ಶಯಾನಂ ಸಹ ಶಕ್ತಿಭಿಃ
ತದಂತೇ ಬೋಧಯಾಂ ಚಕ್ರು ಸ್ತಲ್ಲಿಂಗೈಃ ಶ್ರುತಯಃ ಪರಂ
ಯಥಾ ಶಯಾನಂ ಸಮ್ರಾಜಂ ಬಂದಿನಸ್ತ ತ್ಪರಾಕ್ರಮೈಃ
ಪ್ರತ್ಯೂಷೇಭ್ಯೇತ್ಯ ಸುಶ್ಲೋಕೈಃ ಬೋಧಯಂತ್ಯನುಜೀವಿನಃ
ಜಯ ಜಯ ಜಹ್ಯ ಜಾಮ ಜಿತ ದೋಷ ಗೃಹೀತ ಗುಣಾಂ
ತ್ವಮಸಿ ಯದಾತ್ಮ ನಾ ಸಮವರುದ್ಧ ಸಮಸ್ತ ಭಗಃ

ಅಜ ಜಗದೋಕ ಸಾಮುಖಿಳ ಶಕ್ತ್ಯವಬೋಧಕತೇ
ಕ್ವಚಿದಜಯಾತ್ಮನಾನುಚರತೋನುಚರೇನ್ನಿಗಮಃ
ಸ್ವಗುಣಾಚ್ಛಾದಿಕಾಂ ಹತ್ವಾ ಪರಮಾಚ್ಛಾದಿಕಾಂ ಪರಾಂ
ವ್ಯಾಘುಟ್ಯ ಮೋಕ್ಷ ಪದವೀಂ ದದಾತಿ ಪುರುಷೋತ್ತಮಃ

ರೂಪಕತಾಳ

ಎಂದೆಂದು ನಾಶವಿಲ್ಲದ ಪ್ರಕೃತಿ ತಾ ನಿ
ನಂದವ ಕಾಣಲೀಯಳೆ
ಇಂದ್ವರ್ಕ ಕೋಟಿಗಳ ಗೆಲುವ ನಿನ್ನ ತೇಜೋ
ವೃಂದಕ್ಕೆ ಇನ್ನೊಬ್ಬರಿದಿರೆ ೪೩

ಇವಳ ಕೊಲ್ಲಲಿಬೇಡ ಜೀವಾವರ್ಕಂಗಳ
ವಿವರದಿಂದವಳ ತೊಲಸಿಸು
ಅವಳಲ್ಲದಿನ್ನು ಜೀವರ ಕಣ್ಗೆ ನಿನ್ನ ಮು
ಚ್ಚುವರ್ಯಾರೊ ಮೂಜ್ಜಗದೊಳಗೆ ೪೩

ಹೀನ ಜೀವರು ತುಚ್ಛ ಜ್ಞಾನಾದಿ ಗುಣಗಳ
ನಾನ್ಯಾಕೆ ಬಂಧಿಸಬೇಕು
ಈ ನೀಚ ಕರ್ಮಕ್ಕೆ ನಿಜಅಂಶ ಸಾಕೆಂದು
ತಾನೆ ಜಗದ್ರೂಪಳಾಗಿಹಳು ೪೪

ನಿರವಧಿಕ ಮಹಿಮೆ ನಿನ್ನಾಜ್ಞೆಯಿಂದಲಿ
ಅರಿಯದಂತಾಚರಿಸುವಳು
ಹರಿ ನಿನ್ನ ಮಾಯೆಯ ಕೊಲ್ಲಬೇಡ ಜೀವ
ರಾವರ್ಕಮಾಯೆಯ ಕೊಲ್ಲು ಕೊಲ್ಲು ೪೫

ಜೀವಾವರ್ಕಂಗಳೊಳಗೆರಡು ಮಾಯಗಳಿಹವು
ದೇವ ನೀನೇ ಮಾಯಾದೂರನಲ್ಲೆ
ಶ್ರೀವಿಧಿ ಪೂರ್ವಕ ಶಕ್ತಿ ಪ್ರೇರಕನೆಂದು
ಭಾವೆ ಗಂಡನ ಕೊಂಡಾಡಿದಳು ೪೬

ಪಾದವನೊತ್ತುತ್ತ ಸಕಲ ವೇದಂಗಳ
ಹಾದಿಗಳನಾಲೋಚನದಿ
ಒದುತ ಪಾಡುತ ಪೊಗಳುತಿರಲು ಕೇಳಿ
ಮೋದಿ ಹಯವದನ ಕಣ್ತೆರದ ೪೭

ಇಂತು ಲಕ್ಷ್ಮಿಯೊಡನೆ ಪ್ರಳಯದಿ ಮಲಗಿ ಶ್ರೀ
ಕಾಂತನೆಚ್ಚೆತ್ತನೆಂಬಲ್ಲಿ
ಸಂತೋಷವ ನೀವ ಎರಡನೆ ಸಂಧಿ
ಸಂತರು ಮೆಚ್ಚೆ ಮುಗಿಯಿತು ೪೮

ಶ್ರೀಧರ ಹಯವದನ ನಾರೇಯಣನ ದಯದಿಂದ
ವಾದಿರಾಜೇಂದ್ರ ವಿರಚಿಸಿದ
ಈ ದಿವ್ಯ ಕಾವ್ಯದಿ ಲಯವನೊರವ ರಮ್ಯ
ವಾದ ದ್ವಿತಿಯಸಂಧಿ ಪೊಸಬಗೆ ೪೯

ಶ್ರೀ ವೈಕುಂಠ ವರ್ಣನೆಯೊಳು ಎರಡನೆಯ ಸಂಧಿ
ಸಮಾಪ್ತವಾದುದು
ಶ್ರೀ ಕೃಷ್ಣಾರ್ಪಣಮಸ್ತು



# ಶ್ರೀ ವೈಕುಂಠ ವರ್ಣನೆ

## 'ಸೊಬಗಿನ ಸೋನೆ' ಎಂಬ

### ಮೂರನೆಯ ಸಂಧಿ

ಇದು ಪುಣ್ಯಕಥೆ ಲೋಕಕ್ಕಿದೆ ಮುಕುತಿಯ ಪಥ
ಇದ ಕೇಳುವವನೆ ಕೃತಾರ್ಥ
ಇದು ಸರ್ವಸಾಧನ ವಿಧುಗಳಿಗೆ ಸಮ್ಮತ
ಮುದವ ನೀವುದು ಕೇಳ್ವ ಜನಕೆ ೧

ಶ್ಲೋಕ:—

ಆಸೀದೇಕೋ ವಿಭುಸ್ತತ್ರ
ವಿಷ್ಣುರ್ನಾರಾಯಣೋವ್ಯಯಃ
ನಬ್ರಹ್ಮಾನಚ ರುದ್ರಶ್ಚ
ನದೇವಾ ನಮಹರ್ಷಯಃ

ಪದ ರೂಪಕತಾಳ

ಒಬ್ಬ ನಾರಾಯಣನೆ ಲಯದಲ್ಲಿಪ್ಪನು ಗಡ
ಅಬ್ಜ ಸಂಭವನಾಗಲ್ಲಿರನು
ಅಬ್ಬರದ ರುದ್ರ ಮತ್ತಿದ್ದ ದೇವರ್ಕಳು
ಸರ್ಬರುಷಿಗಳಲ್ಲಿಲ್ಲ ಗಡ ೨

ಏಕೋ ನಾರಾಯಣ ಆಸೀದೆಂಬ ಶ್ರುತಿ
ಶ್ರೀಕೃಷ್ಣನೊಬ್ಬನೆ ಪ್ರಳಯದಲಿ
ಆ ಕಾಲದಿ ನಬ್ರಹ್ಮಾನಚ ಶಂಕರ ಎಂದು
ಬೇಕಾದರ್ಥವ ನಿರ್ಣೈಸಿತಲ್ಲ ೩

ಶ್ಲೋಕ:—

ಸಂಹೃತ್ಯನಿಖಿಳಂ ಶೇತೇ
ಯದಸೌ ಪ್ರಳಯಾಂಭಸಿ
ಕದಾಪಿ ನವಿಯುಜ್ಯೇತ
ತ್ವಯಾ ವಿಶ್ವಪತಿಸ್ಸದಾ

ಪದ ರೂಪಕತಾಳ

ಪ್ರಳಯಕಾಲದಿ ಜಗವೆಲ್ಲ ಲಯವಮಾಡಿ
ಲಲನೆ ಲಕ್ಮೀಕೂಡೆ ವಟದ
ಎಲೆಯಲಿ ಮಲಗಿ ಸುಖದಲಿಹ ಎಂದೆಂದು
ಅಳಿವಿಲ್ಲ ಪ್ರಕೃತಿ ಪುರುಷರ್ಗೆ ೪

ಸಮನಾ ಎಂಬ ಸೂತ್ರ ಪ್ರಕೃತಿ ಶಬ್ದವಾಚ್ಯ
ರಮೆಗೂ ತತ್ಪುರುಷ ಶ್ರೀಹರಿಗೂ
ಸಮದೇಶ ಕಾಲಗಳಲ್ಲಿರವು ಪೇಳಿತಾಗಿ
ಭ್ರಮೆಸಲ್ಲ ನಾವೆಂದರ್ಥದಲ್ಲಿ ೫

ಬೊಮ್ಮನ ಪ್ರಳಯದಿ ಸುಮ್ಮನೆಯಾಗಿಪ್ಪ
ನಮ್ಮ ದೇವಗೆ ಮೃತ್ಯುವಿಲ್ಲ
ಜನ್ಮವಿವಗೆ ಯಿಲ್ಲ ಪ್ರಾಗಭಾವವಿಲ್ಲ
ದಮ್ಮಮ್ಮ ಮೃಣ್ಮಯವಹುದೆ ೬

ಜನನ ಮರಣಗಳ ತೊರೆದಾಲಯದಿ ಹರಿ
ವನಿತೆಯು ರೊಡನಾಡುವಾಗ
ಮನೆ ಮನೆ ದೈವಂಗಳೆಲ್ಲಿ ಪೋದವೊ ಸರ್ವಾ
ಗ್ರಣಿ ಇವನ ಹೆಮ್ಮಗಸು ೭

ಅನೇಕ ದನುಜರಟ್ಟುಳಿ ಬಂದ ಬಂದಾಗ
ಅನುಸರಿಸಿ ಇವನ ಎಂದೆಂದು
ಅನಾಯಾಸದಲ್ಲಿ ಬಾಳ್ವ ದೇವರ ಹರಿ
ಗೆಣೆಯೆಂಬರವಿವೇಕಿಗಳು ೮

'ಪಾರಂತ ಕಾಲೆ ಸರ್ವೇ ಮುಚ್ಯಂತಿ' ಎಂಬ
ನಿರವಕಾಶ ಶ್ರುತಿಯಿರಲು
ದುರಾಸೆ ಬಿಡು ವಾದಿ ಇನ್ನೊಂದು ಲಯವಿಲ್ಲ
ವಿರಂಚಿ ಪ್ರಳಯವೆ ಮಹಾ ಪ್ರಳಯ ೯

ಈ ಲಯಕ್ಕೆಳುಕದ ಕಾರಣ ಹರಿಗುಣ
ಗಳಿಗೆ ಲಯ ಸಲ್ಲದಾಗಿ
ತಾಳದು ನಿರ್ಗುಣ ನಿರಾಕಾರದ ಮಾತು
ಆಲೋಚನೆಯ ಬಲ್ಲವರಿಗೆ ೧೦

ಏಕನೆನಿಪ ಬ್ರಹ್ಮ ಐಕ್ಯವೆಂತಪ್ಪುದು
ಏಕವೇ ಐಕ್ಯವಲ್ಲವಲ್ಲ
ಏಕಸ್ಯಭಾವ ಐಕ್ಯವೆಂದು ಪೇಳ್ವರೆ
ವ್ಯಾಕರಣದವರ ನೀ ಕೇಳೊ ೧೧

ಧರ್ಮವೆನಿಪ ನಿಮ್ಮ ಬ್ರಹ್ಮ ಜೀವರೈಕ್ಯ
ಚಿನ್ಮಾತ್ರದಲಿ ಅದ್ವಿತೀಯ
ಅಮ್ಮಮ್ಮ ಅದ್ವಿತಿಯ ಶ್ರುತಿಯು ನಿನಗೆ
ಸಮ್ಮತೈಕ್ಯವ ಖಂಡಿಸಿತಲ್ಲ ೧೨

ತನ್ನ ಬಾಯಿಗೆ ಮುಟ್ಟುತಿಹ ಮೂಷಕನ ಬಿಟ್ಟು
ನಿನ್ನ ಶ್ರುತಿಯೆಂಬ ಭುಜಗನು
ಅನ್ಯತ್ರ ಪೋಗದೆ ಒಂದರಿಂದುದರ ಸಂ
ಪೂರ್ಣವಾಗಲು ಮತ್ತೆರಗದು ೧೩

ಲೋಕವಿಲ್ಲೆಂಬಾಗ ಲೋಕಾಂತರ್ಗತವಾದೀ
ವಾಕು ತಾನೇ ಪೋಗದಿಹುದೆ
ತಾ ಕೆಡುವರ್ಥವ ತಾನಕಟ ಪೇಳ್ವರೆ
ಕಾಕು ಮಾಡದಿರು ಶ್ರುತಿಗಳ ೧೪

ಶ್ರೌತವಾದರ್ಥವ ಶ್ರುತಿಯನ್ನೆ ಕೆಡಿಸುವ
ಪಾತಕವಂ ಗೈಸುವುದೇ
ಯಾತರಿಂದೇನಾಯ್ತು ತದ್ವಿಘಾತಕ್ಕೆ
ಹೇತುವಲ್ಲೆಂಬರು ಬುಧರು ೧೫

ಚಿನ್ಮಾತ್ರಾಶ್ರಯವೆಂಬ ನಿಮ್ಮ ಅಜ್ಞಾನವು
ನಮ್ಮ ನಾರಾಯಣಗಿಲ್ಲ
ರಮ್ಮೆಯರಸ ತನ್ನ ನಾಭಿ ಪದ್ಮದಿಂದ
ನಿರ್ಮಿಸಿದೀಜಗ ಪುಸಿಯೆ ೧೬

ಅನಾದಿಮಾಯಾ ಸುಪ್ತನು ಗಡ ಜೀವನು
ಅನಿದ್ರ ಗಡ ಪರಬೊಮ್ಮ
ಅನುಭವಕೆ ತಂದುಕೊ ಈ ಶ್ರುತಿಯರ್ಥವ
ಮನಕೆ ಬಂದಂತಾಡಬೇಡ ೧೭

ಮೃತಿಯಿಲ್ಲದವ ನಿತ್ಯಾಮೃತನೆಂದು ಪ್ರಸಿದ್ಧ
ಕೃತಿಯಿಲ್ಲದವ ಪುನರ್ಭವಕೆ
ಅತಿದೂರನಲ್ಲವೆ ಅದರಿಂದ ನಮ್ಮ ಶ್ರೀ
ಪತಿ ನಿತ್ಯ ಮುಕ್ತ ಬಲ್ಲವಗೆ ೧೮

ಅವನಿತ್ಯ ಮುಕ್ತ ಜೀವರು ಮಧ್ಯ ಮುಕ್ತರೆಂ
ಬವಿರುದ್ಧ ಧರ್ಮಮುಕ್ತಿಯೊಳು
ಸುವಿವೇಕಿಗಳಿಗೆ ಸಮ್ಮತವಾದ ಕಾರಣ
ಇವನೈಕ್ಯ ವಲ್ಲಿಯು ಸಲ್ಲ ೧೯

ಎಂದೆಂದು ಕರ್ಣ ಶೂನ್ಯಪನ್ನಗನಿಗು ಕಳುವಿ
ನಿಂದ ಕರ್ಣ ಪೋದವಗು
ಮಂದಮಾನವ ಮಹದಂತರವಲ್ಲವೆ ಈ
ಯಂದ ಮಧ್ಯಮ ಮುಕುತರಿಗು ೨೦

ಸಾಯುಜ್ಯವೆಂಬ ಶಬ್ದವು ಶಾಬ್ದಿಕರಿಗೆ ಯು
ಜುಯೋರ್ಗೆ ಎಂಬ ಧಾತುವಿನಿಂ
ದಾಯಿತೆಂಬುದು ಸಿದ್ಧವದರಿಂದ ಬಾಯಿಗೆ
ಬೀಗವಾಯಿತಲ್ಲ ಖಳರ ೨೧

ಹರಿಯು ಸರ್ವಾಂಗದಿ ತುಂಬಿರ್ದ ಜೀವರ
ಇರವೆ ಸಾಯುಜ್ಯವೆನಿಪುದು
ಮರುಳಾಗಬೇಡ ಮಾನವ ಸರ್ವೇಶನೆತ್ತ
ಹರೇರನುವ್ರತ ಮುಕ್ತರೆತ್ತ ೨೨

ಶ್ಲೋಕ:—

ಪ್ರಕ್ಷೇಹಿ ಚೇತನಗಣಾನ್ ಸುಖದುಃಖ ಮಧ್ಯ
ಸಂಪ್ರಾಪ್ತ ಯೋತನುಭೃತಾಂ ವಿಹೃತಿಂ ಮಮೇಚ್ಛನ್
ಸೋಯಂ ವಿಹಾರ ಇಡಮೇ ತನುಭೃತ್ಸ್ವಭಾವ
ಸಂಭೂತಯೋ ಭವತಿ ಭೂತಿಕೃದೇವ ಭೂತ್ಯಾಃ

ಪದ ರೂಪಕತಾಳ

ಮತ್ತೊಂದು ತಂಡದ ಜೀವರಾಶಿಗಳಿಗೆ
ಮುಕ್ತಿ ಮೊದಲಾದ ಗತಿಯು
ಚಿತ್ತಜನಯ್ಯ ಇತ್ತಪನೆಂದು ಪುನರಪಿ
ಚಿತ್ರ ಜಗತ್ತು ನಿರ್ಮಿಸಿದ ೨೩

ಇದು ಲೀಲೆ ತನಗೆ ಲಕ್ಷ್ಮಿಗೆ ಮಹೈಶ್ವರ್ಯದಾ
ಸ್ಪದವ ಕೊಡುವುದು ಜೀವರಿಗೆ
ಸದ ಸನ್ಮಿಶ್ರ ಫಲವಾಹುದು ಅದರಿಂದ
ಅದುಭುತ ಜಗವ ನಿರ್ಮಿಸಿದ ೨೪

ಲೋಹಿತ ಶುಕ್ಲ ಕೃಷ್ಣಗಳೆನಿಪ ಪ್ರಕೃತಿಯು
ಸ್ನೇಹವ ನಿಜಸತಿಗಿತ್ತು
ಶ್ರೀಹರಿಯುದರಿಂದ ವರ್ಣತ್ರಯದ ರೇಣು
ವ್ಯೂಹವ ಬೇರೆ ಬೇರಿಟ್ಟು ೨೫

ಸತ್ವವೆಂಬ ಗುಣ ಶುಕ್ಲಾಣುಗಳ ರಾಶಿ
ರಕ್ತಾಣುವೆ ರಜೋಗುಣವು
ಮತ್ತೆ ನೀಲಾಣುಗಳ ವೊತ್ತವೆ ತಮೋಗುಣ
ಪ್ರತ್ಯೇಕ ಶಕ್ತಿಗಳಿವಕೆ ೨೬

ಈ ಪರಮಾಣುಗಳ ರೂಪವೆಂಬೋ ಗುಣದ
ವ್ಯಾಪಾರ ಬಹಳವಾಗಿರಲು
ಆ ಪರಮಾಣುಗಳ ಗುಣವೆಂದು ಕರೆವರ್‍ಯೆ
ತಾಪಸರಿದಕೆ ಮೆಚ್ಚುವರು ೨೭

ಯಾವ ದ್ರವ್ಯ ಭಾವಗುಣಕೆ ಗುಣಿಯೊಳಿರೆ
ಭಾವವೆಂದೆಂಬ ರಹಸ್ಯ
ಕೋವಿದವರಿಗೆ ತೋರುವುದು ಈ ಗುಣಗಳನೆ
ಭಾವಜ್ಞರ್ಗುಣವೆಂದೆಂಬುವರು ೨೮

ಇಪ್ಪತ್ತು ನಾಲ್ಕು ಈ ತತ್ವ ಸೂಕ್ಷ್ಮಂಗಳಿಗೆ
ತಪ್ಪದೆ ಸ್ಥೌಲ್ಯ ಬಪ್ಪಂತೆ
ಒಪ್ಪುವೀ ಗುಣತ್ರಯದಣುಗಳ ಕೂಡಿಸಿ
ಸರ್ಪಶಾಯಿ ಸೃಷ್ಟಿಸಿದ ೨೯

ರಾಗ ಕಾಂಬೋಧಿ ರೂಪಕತಾಳ

ಬೆರೆಸಿದ ಇಪ್ಪತ್ತು ನಾಲ್ಕು ತತ್ವಂಗಳ
ಪರಮ ಸೂಕ್ಷ್ಮಾಣು ರಾಶಿಗಳ
ತೆರತೆರದಿ ತೆಗೆದು ತತ್ವಂಗಳ ಸಾಲ
ವಿರಚಿಸುವಂದ ಸಾಲದೆ ೩೦

ಎಷ್ಟು ಮಹತ್ತತ್ವ ಸೃಷ್ಟಿಗಾಗಬೇಕೊ
ಅಷ್ಟು ತ್ರಿಗುಣದ ಅಂಶಗಳ
ಇಟ್ಟು ಮತ್ತದರಿಂದ ಅಹಂಕಾರ ತತ್ವವ
ಪುಟ್ಟಿಸುವುದಕ್ಕೊಂದಿಷ್ಟಿಡುವ ೩೧

ಕಾರಣ ತತ್ವ ರಾಶಿಗಳಿಂದ ತೆಗೆತೆಗೆದು
ಬೇರಿದ್ದ ತ್ರಿಗುಣದಂಶಗಳ
ಸೇರಿಸಿ ಉತ್ತರೋತ್ತರ ತತ್ವಂಗಳ
ಶ್ರೀಧರ ಮಾಡುವ ಕ್ರಮದಿಂದ ೧೦

ಮಹತ್ತೆಂಬ ತತ್ವ ಮಹಿಮೆಯ ನೀವುದು
ಅಹಂ ತತ್ವದಿಂದಹಂಕಾರ
ಬಾಹೋದು ಬುದ್ಧಿ ನಿಶ್ಚೈಸಿಕೊಡುವುದು
ನಾನಾ ಹಂಬಲಿಕೆಯ ಮನವು ೧೧

ಐದು ಕರ್ಮೇಂದ್ರಿಯಗಳೈದು ಜ್ಞಾನೇಂದ್ರಿಯಗ
ಳೈದು ತನ್ಮಾತ್ರ ತತ್ವಗಳು
ಐದು ಭೂತಂಗಳೆಂದಿಪ್ಪತ್ತು ನಾಲಕು
ಆದಿಕಾಲದ ತತ್ವಂಗಳು ೧೨

ಹತ್ತು ಕರಣಂಗಳು ನಿತ್ಯದಿ ವಿಷಯಗಳ
ಅರ್ಥಿಯ ತೋರಿ ಈ ಮನವ
ಅತ್ತಲೆಳೆಯಲು ಉಂಡುಂಡಹಂಕರಿಸೆ
ಮರ್ತ್ಯರಿಗೆ ಬಹುದೆ ಮಹತ್ವ ೧೩

ನಿತ್ಯ ನೈಮಿತ್ಯಕ ಸತ್ಕರ್ಮಂಗಳ ಮರೆ
ದುತ್ತಮರೊಳು ಮತ್ಸರಿಸುವ
ವಿತ್ತ ಸಂಪತ್ತಿಗುನ್ಮತ್ತನಾಗಿ ಭವದಲಿ
ಸುತ್ತಿ ಸುತ್ತಿ ಆರ್ತಿಯನುಂಬ ೧೪

ಅಂಗನೆಯರಾಸೆಗೆ ಚರಣಂಗಳು ನಡೆಸುವುವು
ಕಂಗಳವರಂಗವ ತೋರುವುವು
ಭಂಗಾರ ಕೊಡಿಸ್ಯವರ ಎಂಜಲನುಣಿಸುವುವು ಕ
ರ್ಣಂಗಳು ನುಡಿಗೆ ಮರುಳುಹವು ೧೫

ದುಷ್ಟಾನ್ನ ಉಂಡುಂಡು ಹೊಟ್ಟೆ ಹೊರೆಯಿಸುವುದು
ಭ್ರಷ್ಟರೊಡನಾಡಿಸುವುವು
ಕೊಟ್ಟರೆ ಕೊಂಡಾಡಿ ಕೊಡದಿರೆ ಬೈಸುವುವು
ಕಷ್ಟಗತಿಗೆ ಕಡೆಗೆಳೆಸುವುವು ೩೮

ಈ ತತ್ವಂಗಳಿಗೀಶರಾದ ದೇವತೆಗಳ
ವ್ರಾತಗಳನಿವು ಕೆಡಿಸವು
ಭೂತಳದೊಳಗರಸಿನ ಮನೆ ಸಂಕೋಲೆ
ಆತನ ಕಾಲ ಕಟ್ಟುವುದೆ ೩೯

ಜೀವರಾಶಿಗಳಿಗೀ ತತ್ವಗಳಿಂದಲೆ
ನೋವ ನೀವುತ ಭವದೊಳಗೆ
ತಾವಿದಕ್ಕೊಳಗಾಗದಿಹರು ಶ್ರೀಹರಿಯ ಕೃ
ಪಾವಲೋಕನ ಬಲದಿಂದ ೪೦

ಇಂತು ಭ್ರಾಂತಿಯ ನೀವ ಈ ತತ್ವಂಗಳೆ ಮ
ಹಂತರ ಸಂಗ ದೊರಕಲು
ಸಂತತ ಶ್ರವಣಾದಿ ಸನ್ಮಾರ್ಗಕ್ಕೆರಗಿಸಿ
ಕಂತುಪಿತನ ತೋರಿಸುವುವು ೪೧

ಹರಿಯಾತ್ರೆ ನಡೆಸುವುವು ಹರಿನಾಮ ನುಡಿಸುವುವು
ಹರಿಪೂಜೆಯನೆ ಮಾಡಿಸುವುವು
ಹರಿಮೂರ್ತಿ ನೋಡಿಸಿ ಹರಿಕೀರ್ತಿ ಪಾಡಿಸಿ
ನರರ ಹಂಕೃತಿ ಕೆಡಿಸುವುವು ೪೨

ಉಕ್ಕು ತಗ್ಗಿಸುವುವು ಸೊಕ್ಕು ನಿವಾರಿಸಿ
ಸತ್ಕರ್ಮಕಿಕ್ಕಿ ಸಲಹುವವು
ದುಃಖಿಜೀವ ಪಂಚಭೂತಾತ್ಮಕ ದೇಹ
ದಕ್ಕರ ಬಿಡಿಸಿ ರಕ್ಷಿಪುವು ೪೩

ಈ ಸುಪುಣ್ಯವಮಾಡಿ ದಿನ ದಿನ ಧೇನಿಸೆ
ಶ್ರೀಶ ಸಂತೋಷಿಸಿ ತನ್ನ
ಭಾಸುರ ಮೂರ್ತಿಯ ಕಣ್ಗೆ ಕಾಣಿಸಿಕೊಡುವ
ದೋಷಗಳ ದೂರಕ್ಕೋಡಿಸುವ ೪೪

ಅಂತವಿಲ್ಲದ ಸ್ವರೂಪ ಸುಖದನುಭವಕೆ
ಅಂತರಾಯವೆ ಮಾಳ್ಪವೆಂದು
ಚಿಂತಿಸಿ ತುದಿಯೊಳಿವ ಸಂತರಿಸುವಂತೆ ಶ್ರೀ
ಕಾಂತನ್ನ ಸಂತರ್ಬೇಡುವರು ೪೫

ಕಣ್ಣಂಶ ಕಾಣೋದು ಕಿವಿಯಂಶ ಕೇಳೋದು
ರ-ಸನಂಶಾಸ್ವಾದಿಸುವುದು
ಭಿನ್ನ ತತ್ವಗಳಿಗೆ ಭಿನ್ನ ಭಿನ್ನ ಕಾರ್ಯ
ವನ್ನೆ ಮಾಡುವ ಶಕ್ತಿ ಕಾಣಿರೊ ೪೬

ಅನ್ಯೋನ್ಯ ಕಾರ್ಯವ ಮಾಡಲರಿಯವು ಚ
ರಣ್ಣ ನಡೆದಂತೆ ಕೈ ನಡೆಯುವುದೆ
ಘ್ರಾಣಗಂಧವಾ ಘ್ರಾಣಿಸುವಂತೆ ತ್ವಗಂಶ
ಘ್ರಾಣಿಸ ಬಲ್ಲುದೆ ಕೇಳಿ ೪೭

ಇಂಬು ಕೊಡುವುದಕ್ಕೆ ಅಂಬರವೆ ಬೇಕು
ಬಾಯ್ತುಂಬುವರೆ ಬಾಯೇ ಬೇಕು
ಉಂಬಡುಗೆಗೆ ಕಿಚ್ಚು ಬೇಕು ತೃಷೆಗಳೆವರೆ
ಅಂಬುವೆ ಬೇಕುಣಲನ್ನ ಬೇಕು ೪೮

ಆದರಿಂದ ಇಪ್ಪತ್ತು ನಾಲ್ಕು ತತ್ವಂಗಳಿಗೆ
ಅಧಿಕನ್ಯೂನ ಸಂಖ್ಯಾಸಲ್ಲ
ಇದನು ವಿವೇಕಿಸಿ ಹರಿಕಂಡು ಅವರವರಿಂ
ಮೊದಲೆ ರಾಶಿಗಳ ಸೃಜಿಸುವ ೪೯

ಇಂತು ತತ್ವ ಸೂಕ್ಷ್ಮಾಂಶ ಪ್ರಕೃತಿಯೊಳ
ನಂತಗಳಾಗಿಪ್ಪವು ಗಡ
ಅಂಥಾರಾಶಿಗಳ ನಾನಾ ಧಾನ್ಯದ ರಾಶಿ
ಯಂತೆ ಕೂಡಿ ಸೃಷ್ಟಿಸುವ ೫೩

ಇದರೊಳು ಮೊದಲು ಮಹತ್ತತ್ವಾಂಶದಿ ಸೃಷ್ಟಿ
ಅದರಿಂ ಮೇಲೆ ಕ್ರಮಕ್ರಮದಿ
ತುದಿಯ ಪೃಥ್ವಿತತ್ವ ಪರಿಯಂತ ಅವಸವಸೆ
ವದಗಿಸಿ ಮಾಳ್ಪ ಹರಿಗೆಣೆಯುಂಟೆ ೫೪

ರಾಗ ಝಂಪೆತಾಳ

ಮಹತ್ತತ್ವದಂಶವೆ ಶುಕ್ಲವಾಗಿಪ್ಪವು ಗಡ
ಅಹಂತತ್ವ ಮೂರು ಬಣ್ಣವಕ್ಕು
ಆಹುದಾ ಶುಕ್ಲಾಣುಗಳಿಂದ ಬುದ್ಧಿಯು ಮನ
ಲೋಹಿತಾಂಶಗಳಿಂ ದಶೇಂದ್ರಿಯಂಗಳು ೫೫

ಕಪ್ಪಿನಂಶಗಳಿಂದ ಪಂಚಭೂತಂಗಳು
ಕಲ್ಪನೆಯುಲ್ಲ ಹಿರಿಯರು
ಒಪ್ಪಿ ಪೇಳುವರಿಂತು ಬುದ್ಧಿಯೆಡನೆ ಮನ
ಕೊಪ್ಪ ಶೋಡಶ ಕಳೆಗಳು ೫೬

ತಾಮಸವೆಂಬ ಕಪ್ಪಿನಂಶದಿಂದ ಪಂಚ
ತನ್ಮಾತ್ರ ಸೃಷ್ಟಿ ಮೊದಲು ಗಡ
ಆಮೇಲೆ ವ್ಯೋಮಾದಿ ಪಂಚ ಭೂತಂಗಳ
ಜನ್ಮ ಎಂಬೋದು ಸಿದ್ಧಾಂತ ೫೭

ತುದಿಯೊಳು ಸೃಷ್ಟಿಸಿದಿಪ್ಪತ್ತು ಮೂರನೆ
ಉದಕವೆಂಬ ತತ್ವದೊಳಗೆ
ಕದಡದಂತೆ ಭೂರಜವಾಡಿ ಕೂಡಲಿಂ
ತುದಿಸಿದವಖಿಳ ತತ್ವಗಳು ೫೮

ಇಂಥಮಹದಾದಿ ತತ್ವವ ಸೃಷ್ಟಿಸಿ
ತತ್ತ್ವಸ್ಥಾನದಲಿಟ್ಟು ಪೊರೆದ
ಉತ್ತಮ ಪುರುಷ ಅವರ ತೆತ್ತಿಗನಾಗಿ
ಸುತ್ತ ಸುರರ ನಿರ್ಮಿಸಿದನು ೩೬

ಶುದ್ಧ ಸತ್ವಗುಣದಿಂದಲೆ ತತ್ವಂಗ
ಳಾಳ್ವ ದೇವರ ದೇಹಂಗಳನು
ಮಾಡ್ದವರ ಯೋಗ್ಯತೆಗೆ ತಕ್ಕ ತಕ್ಕಷ್ಟು
ಕೊಡ್ದ ಮಿಕ್ಕ ಸುಗುಣಂಗಳನು ೩೭

ಮತ್ತೆ ತನ್ನರಸಿಯೊಡನೆ ನೀರೊಳ್ಮಲಗಿದ್ದು
ತತ್ವದೊಂದೊಂದಂಶಗಳನು
ಚಿತ್ರರೇತವ ಮಾಡಿ ಚಿನ್ನದಜಾಂಡವ
ಸತ್ಯ ಸಂಕಲ್ಪ ನಿರ್ಮಿಸಿದ ೩೮

ನೀರೊಳಗಿದ್ದ ಭೂರೇಣುಗಳೆಲ್ಲವ
ನೇರಿಸಿ ತನ್ನುದರದೊಳು
ಆ ರಮೆಯು ಗರ್ಭದಿಂ ಯೋನಿದ್ವಾರದಿ ತೆಗೆದು
ನೀರಜ ಜಾಂಡವ ನಿರ್ಮಿಸಿದ ೩೯

ನೂರುಕೋಟಿ ಯೋಜನ ಪ್ರಮಾಣ ಸುತ್ತಳು
ಸೂರಿಯನಂತೆ ಶೋಭಿಸುವ
ಆ ರಮ್ಯ ಬ್ರೊಮ್ಹಾಂಡ ಪೊಕ್ಕು ಪುನರಪಿ
ನೀರೊಳು ಕೃಷ್ಣ ಮಲಗಿದ್ದ ೪೦

ಬ್ರೊಮ್ಹಾಂಡದೊಳಗೆ ಇಪ್ಪತ್ತುನಾಲ್ಕು ತತ್ವ
ಸುಮ್ಮನವಾಗಿ ಬೆರಸಿಹುವು
ಆ ಮೇಲೆ ಭೂಮ್ಯಾದಿ ಹತ್ತಾವರಣಂಗಳು
ಕ್ರಮ್ಮದಿ ಸುತ್ತ ಮುತ್ತಿಹವು ೪೧

ಪೃಥ್ವಿ ರೂಪವಾದ ಅಂಡವೆಂಬಾವರಣ
ಸುತ್ತಲು ಸುತ್ತಿಕೊಂಡಿಹುದು
ಮತ್ತೆ ಅಬ್ಬಾದಿ ಸತ್ವಂತವಾದಾವರಣ
ಹತ್ತು ಹತ್ತಾಗಿ ಬೆಳದಿಹವು ೬೨

ಬೆಳೆದ ತಾವಿನಲ್ಲಿ ಮೇಲ್ ಮೇಲಾದಾವರಣ
ಉಳಿದ ತತ್ವವನೊಳಗೆಳೆದು
ಒಳಗೆ ಹೊರಗೆ ಎಲ್ಲ ಬೆರೆಸಿಕೊಂಡಿಪ್ಪುದಿಂ
ತಿಲ್ಲದಿರೆ ಮಹಿಮೆಯೆಂತಿಪ್ಪುದಿದಕೆ ೬೩

ಉತ್ತರೋತ್ತರ ತತ್ವಕ್ಕಧಿಕ ವ್ಯಾಪ್ತಿ ಬೇಕು
ಸುತ್ತು ಸುತ್ತಿಹುದೈಸೆ ಎನಲು
ತತ್ವಮಯವಾದ ದೇಹಗಳೆಂತಿಪ್ಪುವು ಜೀವ
ರ ತ್ರಿಗುಣಂಗಳೆಂತು ಕಟ್ಟುವವು ೬೪

ಒಳಹೊರಗೆ ವ್ಯಾಪ್ತವಾಗಿಹವು ಮೂಲಣ ತತ್ವ
ಕೆಳಕೆಳಗೆ ಕೀಳು ತತ್ವಗಳಿಹವು
ಜಲಜನಾಭನಿಂತು ಹತ್ತಾವರಣಂಗಳ
ಒಳಗೆ ಈ ಜಗವ ನಿರ್ಮಿಸಿದ ೬೫

ನೂರುಕೋಟಿ ಯೋಜನ ಮೊದಲಂಡಾವರಣಕ್ಕೆ
ನೀರಮೇಲೆ ಊರೇಳಾಗಿ
ತೋರುವ ಲೋಕಗಳಿಂದೈವತ್ತು ಕೋಟಿ ಮೇ
ಲಾರು ಮೂರು ದಶೋತ್ತರವು ೬೬

ಇಂತೆಲ್ಲವ ಕೂಡಿ ವ್ಯಾಪ್ತವಾದ ಲಕುಮಿ
ಕಾಂತನ ದಿವ್ಯ ಶ್ರೀ ಮೂರ್ತಿ
ಅಂತುಕೊಂಡಿಪ್ಪುದು ರೋಮ ಕೂಪವ ತುಂಬಿ
ಮಂತೆ ಆ ಹರಿಗಿನ್ನಾರೆದುರು ೬೭

ಅಂಡೋದಕದಿ ಸಾಸಿರ ವರ್ಷ ಪರಿಯಂತ
ಪುಂಡರಿಕಾಕ್ಷ ಪವಡಿಸಿದ
ಚಂಡಾಂಶು ಸಾಹಸ್ರ ಸನ್ನಿಭನಾಭಿಯಿಂದು
ದ್ದಂಡ ಕಮಲವ ನಿರ್ಮಿಸಿದ ೨೮

ಇಪ್ಪತ್ತೈದು ಕೋಟಿ ಯೋಜನ ಬೆಳಗುವ
ತತ್ಪದ್ಮದಲ್ಲಿ ಪದ್ಮಜನ
ಕಲ್ಪಿಸಿ ಆ ಪದ್ಮದಳದಲ್ಲಿ ಈರೇಳಾ
ಗಿಪ್ಪ ಲೋಕಂಗಳ ಮಾಡಿದನು ೨೯

ಮೊದಲ ಬ್ರಹ್ಮನಿಗೆ ಮುಕ್ತಿಪದವನಿತ್ತು
ಉದರದಿ ಮುಖ್ಯ ಪ್ರಾಣನಿಗೆ
ಪದುಮ ಸಂಭವನೆಂಬ ಪಟ್ಟವನಿತ್ತು ಈ
ಹದಿನಾಲ್ಕು ಲೋಕವನಾಳೆಂದ ೩೦

ಶ್ಲೋಕ —

ಮುಖ್ಯ ಪ್ರಾಣೇನಮದ್ದೇಹೇ
ಮಂತ್ರತ್ರಯ ಜಪಸ್ಸದಾ
ಅನುಗ್ರಹಾಯಮೇ ವಿಷ್ಣೋಃ
ಪ್ರೀತಯೇ ಕ್ರಿಯತೇಸ್ಸದಾ
ಏಕವಿಂಶತ್ಸಹಸ್ರಾತ್ಮಾ
ಸಷಟ್ಛತಮಹರ್ನಿ ಶಂ
ಶ್ವಾಸ ರೂಪಜಪೋನಿತ್ಯಂ
ಉಭಯೋರ್ವಿದ್ವದಜ್ಞಯೋಃ

ಪದ ರೂಪಕತಾಳ

ಆರುನೂರು ಕೂಡಿ ಇಪ್ಪತ್ತು ಒಂದು ಸಾ
ವಿರ ಮಂತ್ರೈಕ ಶ್ವಾಸ ಜಪವ
ಮಾರುತ ಈರೇಳು ಲೋಕದ ಜೀವರೊ
ಳೋರಂತೆ ಮಾಡಿ ಮೆಚ್ಚಿಸುವ ೨೧

ಇಂಥ ಭಕ್ತಸಿಗೆ ಬ್ರಹ್ಮ ಪಟ್ಟವನು ಶ್ರೀ
ಕಾಂತ ಕಟ್ಟುವದೊಂದಚ್ಚರಿಯೆ
ಎಂತೆಂತು ಸೇವಿಪರಂತಂತವರ ದಯ
ವಂತನನಂತ ರಕ್ಷಿಸನೆ ೨೨

ಆರುತಿಂಗಳು ತಪವಮಾಡಿದ ಧ್ರುವನಿಗೆ
ಸೇರಿಸಿದನು ಧ್ರುವಪದವ
ನೂರು ಬ್ರಹ್ಮನ ವರುಷ ಪರಿಯಂತ ಈ ಪಧವಿ
ಆರಾಧಿಸಿದಂಥ ಭಕುತನಿಗೆ ೨೩

ಪೂರೈಸಿಕೊಡುವುದಕೆ ಕಡೆಯಿಲ್ಲದ ಋಣ ಸಾ
ಸಿರಕೊಂದು ಕೊಟ್ಟು ತಿದ್ದುವಂತೆ
ಮಾರುತಗೆ ಬ್ರಹ್ಮ ಪದವಿತ್ತು ಮತ್ತವಗೆ ತ
ನ್ನಾರೋಗಣೆಯಿಂದರ್ಧ ಯಾವ ೨೪

ಲೆಕ್ಕವಿಲ್ಲದ ನಾನಾಜೀವರು ಮಾಡುವ
ಸತ್ಕರ್ಮಂಗಳ ಫಲವಾದ
ಸೌಖ್ಯವ ಬೊಮ್ಮ ಪಟ್ಟವನಾಳ್ದ ಜೀವರ
ಲಕ್ಷ್ಮೀಶ ಕೂಡಕೊಂಡುಂಬ ೨೫

ಆದರಿಂದ ಸಹಭೋಗ ಪದವೆಂಬ ಇಂಥಾ ಸಹ
ಪದವೀವ ಮುಖ್ಯ ಪ್ರಾಣನಿಗೆ
ಮದನನ್ನೈಯನಿಂತು ಮಾಡಿದ ಸೇವೆಗೆ
ಸಾದೃಶ ಫಲವಿಂತು ಕೊಡುವ ೨೬

ನಂಬಿದ ಸಾಲಿಗ ಬಂದು ಬಂದು ಬೇಡ
ಲುಂಬಾಗ ಕೂಡಿಕೊಂಡುಂಡು
ನಂಬಿಸುವಂತೆ ಬೊಮ್ಮನಿಗರ್ಧ ಉಣಿಸಿ ಹರಿ
ಉಂಬ ಸಂಭ್ರಮವ ನೇಸೆಂಬೆ ೭೭

ಬೊಮ್ಮನ ನೂರು ವರುಷ ಪರಿಯಂತ
ಸವಿಸ್ತಾರ ಮಾಡಿದ ಜಪಕೆ
ಸಮ್ಮಾನ ಫಲವೊಂದು ಬ್ರಹ್ಮ ಕಲ್ಪದಲುಣಿಸಿ
ರಮ್ಮೇಶ ತಾನೆಂದೆಂದುಂಬ ೭೮

ಅಂದು ಹನುಮನಿಗಿತ್ತ ಚೆಂಡದ ವರವನು
ಇಂದು ಸಾರ್ಥಕ ಮಾಡಿದನು
ಇಂದಿರೆಯೊಡಗೂಡಿ ತನ್ನ ಪುರಂಗಳ
ಪೊಂದಿ ಆನಂದದಿಂದಿದ್ದ ೭೯

ಕರ್ತೃ ಹಯವದನ ಬೊಮ್ಮಾಂಡದೊಳಗೆ ಸಾ
ರ್ವತ್ರ ಜೀವರ ತುಂಬಿಸಿದನು
ಮುಕ್ತವರ್ಗವ ತನ್ನ ಮೂರು ಸ್ಥಾನದಲಿಟ್ಟು
ವಿಸ್ತರಿಸಿದ ಶ್ರುತಿಪಥವ ೮೦

ಇಂದಿರೇಶನಿಂತು ಈ ಜಗವೆಲ್ಲವ
ಚೆಂದದಿಂದಲಿ ನಿರ್ಮಿಸಿದನು
ಎಂದು ಪೇಳುವಲ್ಲಿ ಮೂರನೆ ಸಂಧಿಯು
ಸಂದುಪೋಯಿತು ಕೇಳಿ ಬುಧರು ೮೧

ದೈತ್ಯರಿಂದ ಬಾಧೆ ಬಂದ ಬಂದಾಗ ಹರಿ
ಹತ್ತುವ ತಾರಗಳ ಮಾಡಿ
ಭೃತ್ಯರ ಪೊರೆದ ತನ್ನರ್ಥಿಯ ಪೂಜೆಯ
ಹತ್ತಿರೇ ಇದ್ದು ಕೈಗೊಂಬ ೮೨

ಶ್ರೀಧರ ಹಯವದನ ರಾಯನ ದಯದಿಂದ
ವಾದಿರಾಜೇಂದ್ರ ವಿರಚಿಸಿದ
ಈ ದಿವ್ಯಕಾವ್ಯದಿ ಸೃಷ್ಟಿಯೆಂಬೆರೆವ ರಮ್ಯ
ವಾದ ತೃತೀಯ ಸಂಧಿ ಪೊಸಬಗೆ ೨೩

'ಸೊಬಗಿನ ಸೋನೆ' ಎಂಬ ಮೂರನೆಯ ಸೃಷ್ಟಿ ಸಂಧಿ
ಸಮಾಪ್ತವಾದುದು
ಶ್ರೀ ಕೃಷ್ಣಾರ್ಪಣಮಸ್ತು



# ಶ್ರೀ ವೈಕುಂಠ ವರ್ಣನೆ

## ನಾಲ್ಕನೆಯ ಸ್ಥಿತಿ ಸಂಧಿ

ಇದು ಪುಣ್ಯಕಥೆ ಲೋಕಕ್ಕಿದೆ ಮುಕುತಿಯ ಪಥ
ಇದಕೇಳುವವನೆ ಕೃತಾರ್ಥ
ಇದು ಸರ್ವಸಾಧನ ವಿಧುಗಳಿಗೆ ಸಮ್ಮತ
ಮುದವ ನೀವುದು ಕೇಳ್ವ ಜನಕೆ ೧

ಶ್ಲೋಕ:—

ನಾರಾಯಣಾಯ ಪರಿಪೂರ್ಣ ಗುಣಾರ್ಣವಾಯ
ವಿಶ್ವೋದಯ ಸ್ಥಿತಿಲಯೋ ನಿಯತಿಪ್ರದಾಯ
ಜ್ಞಾನ ಪ್ರದಾಯ ವಿಬುಧಾ ಸುರಸೌಖ್ಯ ದುಃಖ
ಸತ್ಕಾರಣಾಯ ವಿತತಾಯ ನಮೋ ನಮಸ್ತೇ

ಪದ ಝಂಪೆತಾಳ

ನೀಲ ನಿರ್ಮಲಗಾತ್ರ ನಿರುಪಮ ಸುಚರಿತ್ರ
ಮೂಲಕಾರಣ ಮುಕ್ತರೊಡೆಯ
ಪಾಲಸಾಗರ ಶಯನ ಪಂಕಜನಾಭ ನೀ
ಪಾಲಿಸೊ ಪರಮ ಪಾವನ್ನ ೨

ಹಾರ ಕೌಸ್ತುಭಧರ ಹಾವಿನ ಮೇಲೊರಗಿಪ್ಪ
ನಾರಾಯಣ ನಳಿನಾಕ್ಷ
ಚಾರುಕುಂಡಲ ಚೆಲ್ವ ಚಂದ್ರವದನ ನಮ್ಮ
ಮಾರಜನಕ ಮನ್ನಿಸುವ ೧

ಪೊನ್ನ ಪೆಂಡೆಯ ಕಾಂಚಿ ಪೊಳೆವ ಪೀತಾಂಬರ
ರನ್ನದ ಮುಕುಟ ರಂಜಿಸಲು
ಅನ್ನಘಾರ್ಘ್ಯಾಭರಣದ ಅರ್ಥಿ ಹರಿ ನಮ್ಮ
ಗುನ್ನತ ಸುಖವನುಣ್ಣಿಸುವ ೨

ಕಂಜ ಕಂಬು ಚಕ್ರ ಕೌಮೋದಕಿ ಹಸ್ತ
ಮಂಜುಳ ಮೂರ್ತಿ ಮಾರಮಣ
ಕುಂಜರ ಭಯಹಾರಿ ಕುಜನ ಸಂಹಾರಿ ನಿ
ರಂಜನ ರಕ್ಷಿಸು ಜಗವ ೩

ದುಷ್ಟ ದಾನವನೆಬ್ಬಟ್ಟಿ ಸುಜನರ ಪ್ರ
ತಿಷ್ಠೆಯ ಮಾಡಿ ರಕ್ಷಿಸಿದ
ಪಟ್ಟವ ಶಕ್ರಂಗೆ ಕಟ್ಟಿ ಬಲಿಯ ಕೆಳ
ಗಿಟ್ಟು ತನ್ನಿಷ್ಟರನು ಪೊರೆದ ೪

ಗ್ರಂಥಾದಿಯಲಿ ಮಾಳ್ಪ ಮಂಗಳಕೆ ಸಲೆ
ಸಂದ ವೇದ ವಾಕ್ಯವಿಲ್ಲದಿರೆ
ವ್ಯರ್ಥ ಶಿಷ್ಟಾಚಾರದ ಬಲದಿಂದಲಿ
ಒಂದು ಶ್ರುತಿಯ ತಂಬು ಕೊಂಬುವುದು ೫

ಸಾಂಬಾದಿತ್ಯ ವಿಷ್ಣು ಸ್ವಾಮಿ ಮತದವರೆಂಬ
ನಿಮ್ಮವರೇ ಧರಿಸುವರು
ತುಂಬಿದ ತತ್ವವಾದಿಗಳು ರಾಮಾನುಜರು
ಸಂಭ್ರಮದಿ ತಪ್ತ ಚಕ್ರ ಧರಿಸೋರ್‍ನೈ ೬

ನಿಮ್ಮ ಮತದ ಸನ್ಯಾಸಿಗಳೆಲ್ಲರು
ನಿರ್ಮಲೋರ್ಧ್ವ ಪುಂಡ್ರ ಧರಿಸಿ
ತಮ್ಮ ಕರದಿಂದಲೆ ಚಕ್ರಮುದ್ರಿಕೆ ಸ
ತ್ಕರ್ಮ ಮಾಡುವಾಗ ತೊಡಗುವರು ೯

ಸ್ವತಪ್ತ ಚಕ್ರ ಸುಪವಿತ್ರ ಮುದ್ರಿಕೆ ಎಂದು
ಶ್ವೇತೋರ್ಧ್ವಪುಂಡ್ರ ಜ್ವಾಲೆಂದು
ನಿಮ್ಮ ಮತದ ನಿರ್ಮಿತಿಗಳು ಮನ್ನಿಸಿದ ಶ್ರುತಿಯಿಂದು
ಯಾತಕಿನ್ನು ಬರಿದೆ ಕಲಹ ೧೦

ಇಷ್ಟು ತಿಪ್ಪಾಚಾರಕೆಂದು ಮೂಲವೇದ
ಸ್ವಾರ್ಥ ಬಿಟ್ಟು ಕೆಡುವರೆ
ಪಟ್ಟದ ರುದ್ರ ಪದ್ಮದಲೆತ್ತಿದ ಶ್ರುತಿಯೊಡನೆ
ಬಿಟ್ಟು ಚಕ್ರವ ಧರಿಸಿರೊ ೧೧

ಶ್ರುತಿ:—

ಪವಿತ್ರಂತೇ ವಿತತಂ ಬ್ರಹ್ಮಣಸ್ಪತೇ
ಪ್ರಭುರ್ಗಾತ್ರಾಣಿ ಪರಿಯೇಷಿ ವಿಶ್ವತಃ
ಅತಪ್ತತನೂರ್ನತದಾಮೋ ಅಶ್ನುತೇ
ಶೃತಾಸ ಇದ್ವಹಂತಸ್ಸಮಾಶತಾ

ಎಂಬ ಈ ಶ್ರುತ್ಯರ್ಥವ ತುಂಬಿಸಿ ಪೇಳಿದ ಪದ
ನಂಬಿ ಕೇಳಿರೊ ನಾವೆಂದುದೆ ತತ್ವ

ಪದ ಝಂಪೆತಾಳ

ಉನ್ನಂತ ಬ್ರಹ್ಮನಿಗೆ ಪತಿಯೆನಿಪ ಪ್ರಭು ಜಗ
ತ್ತಿನೊಳಗೆ ಹೊರಗೆ ಪೂರ್ಣ
ನಿನ್ನ ಕರ ಕಂಜದಲಿ ನೆಲೆಸಿದ್ದ ಸುದರ್ಶನ
ನಿನ್ನಂತೆ ಜಗದೊಳಗೆ ಪೂರ್ಣ ೧೨

ತನ್ನವನ ಪವಿ ಪಂಜರದಂತೆ ಕಾಯುತ್ತೈಂಬ
ಮಾನ್ಯ ಪದಗಳ ಯೋಗ ಬಲದಿ
ಧನ್ಯರೀ ಹರಿಯ ಚಕ್ರವನ್ನೆ ಪವಿತ್ರ
ಪುಣ್ಯ ನಾಮದಿ ಕರೆಯುತಿಹರು ೧೩

ಈ ಚಕ್ರದಿಂದ ಆವನು ಅತಪ್ತನೊ ಆ
ನೀಚನಿಗೆ ಪರಸುಖ ದೊರಕದು
ಯೋಚಿಸಲಾಮಘಟದಂತವ ಕೆಡುವ ತ್ರಿ
ಲೋಚನನ ನೀ ಶ್ರುತಿಗರ್ಥ ಪೇಳ್ದ ೧೪

ವ್ಯಾಪಾಕೇ ಎಂಬ ಧಾತುವಿನಿಂದಲೀ ಚಕ್ರ
ವ್ಯಾಪಕ ಭುಜ ಯುಗದಲ್ಲಿಹುದು
ಗೋಪೀ ಚಂದನದಿಂದ ದಿನ ದಿನ ವಹಿಸುವರ
ಕೃಪಾಳು ಹರಿ ಅವರಿಗೊಲಿವ ೧೫

ಉದರ ವ್ಯಥೆಯು ಬಿಡಿಸುವರೆ ಪೊಟ್ಟೆಯಮೇಲೆ
ಮುಖದಿಂದ ತಪ್ತ ಚಕ್ರವನು
ಬುಧರು ಧರಿಸುವರದನು ವಿಧಿಸಬೇಕೆಂದು ತನು
ಪದ ಪೇಳಿತು ನಮ್ಮ ವೇದ ೧೬

ತಪ್ತ ಚಕ್ರವ ಧರಿಸಬೇಕೆಂದು ತೊಡಗಿ
ತತ್ಪ್ರಸ್ತಾಪದಲಿ ಈ ಶ್ರುತಿಯು
ಅರ್ಥ ಪೂರ್ವವಾಗಿ ವಿಸ್ತರಿಸಿ ಪೇಳಿದ ಶಿವ
ಮತ್ತೊಂದರ್ಥವನಿದಕೆ ಮೆಚ್ಚ ೧೭

ಶ್ಲೋಕ: —

ಪವಿತ್ರಂ ಬ್ರಹ್ಮಣ ಸ್ಪತ್ಯಂ
ಜಗದ್ವ್ಯಾಪ್ತಂ ಹರೇಸ್ಸದಾ
ತೇನಾ ತಪ್ತ ಹರೇರ್ಯೋಷಾಂ
ತೇನಯಾಂತಿ ಹರೇಃ ಪದಂ

ಎಂಬ ಶ್ರುತ್ಯರ್ಥವ ನಂಬಿಸಿ ಪೇಳಿದ ಪದವ
ನಂಬಿ ಕೇಳಿರೊ ನಾಪೆಂದುದೆ ತತ್ವ

ಪದ ಝಂಪೆತಾಳ

ಸೋಮ ರಸವನ್ನು ಶೋಧಿಸುವ ಲೌಕಿಕ ವಸ್ತ್ರ
ಕ್ಕಾಮುಹ ಚಕ್ರ ಸನ್ನಿಧಿಯು
ಧೀಮಂತರ್ಮಾಡಿಸಬೇಕೆಂದು ಪವಿತ್ರ
ನಾಮ ಶ್ರುತಿಯಿಂ ಮಂತ್ರಿಸುವರು ೧೮

ಪಾವನವ ಮಾಡಿಸುವ ಶಕ್ತಿ ನಮ್ಮ ಶ್ರೀ
ದೇವಿಯುರಸನ ಚಕ್ರಕುಂಟೆಂಬುದನು
ಭಾವಜ್ಞರಿಗೆ ತೋರಿಸುವ ಹರಿಯ ಚಕ್ರವನೆ
ಪವಿತ್ರನಾಮದಿಂ ಶ್ರುತಿ ಕರೆಯಿತು ೧೯

ಶೋಧಿಸುವುದಕೆ ಸಹಸ್ರ ಛಿದ್ರವುಳ್ಳ
ಮಾಧವನ ಚಕ್ರಬೇಕೆಂದು
ಈ ಚಕ್ರ ಮಂತ್ರವನೆ ನ್ಯಾಯಕೋವಿದ
ರಾದ ಮುನಿಗಳೆ ಮನ್ನಿಸುವರೊ ೨೦

ಗಂಗೆ ಉದಕದಿಂದ ತೊಳೆದ ವಸ್ತ್ರಗಳ ಆ
ಗಂಗೆ ಶಬ್ದದಿ ಕರೆವರೆ ಮರುಳ
ತುಂಗ ಚಕ್ರಮಂತ್ರದಿಂ ಮಂತ್ರಿಸಿದ ದ್ರವ್ಯ
ಮಂಗಳ ಮಂತ್ರಾರ್ಥವಾಗುವುದೆ ೨೧

ಲೌಕಿಕಾನ್ನವ ಶುದ್ಧಿ ಮಾಡುವುದಕ್ಕೆ ವಿ
ವೇಕಿಗಳೆಲ್ಲ ವ್ಯಾಹೃತಿಯಿಂ ಪ್ರೋಕ್ಷಿಸಿ
ಬೇಕಾದ ಗಾಯಿತ್ರಿ ಮಂತ್ರದಿಂ ಮಂತ್ರಿಸಲಾ
ಲೌಕೀಕಾನ್ನವು ಗಾಯತ್ರ್ಯಹುದೆ ೨೨

ಇದನರಿಯದ ವಾದಿ ವಸ್ತ್ರದ ತುಂಡನಾ
ಪದದಿ ಕರೆದನು ಅದಕೆ ಮೂಲಕಾರಣ
ಪದುವೇ ಪುರಾಣವನು ಮುನಿಗಳೆಲ್ಲರು ಬಲ್ಲ
ರಿದನರಿಯದ ಭ್ರಷ್ಟ ಭಾಸ್ಕರ ತಸ್ಕರ ೨೩

ಆದರಿಂದ ತ್ರಿಜಗದ ಗುರುವಾದ ಶಿವನಾಜ್ಞೆ
ವಿಧಿಸಿ ಮಾಡಿದ ಗುರುಗಳಿಗೆ ಗುರುವಾದ
ಮದನ ವೈರಿಯ ಮತವು ಸೂತ್ರಗಾರರ ಮತವು
ಸಿದ್ಧಾಂತಿಸುತ್ತಿರಲೊಂದು ಮತವಾಯಿತು ೨೪

ಶ್ಲೋಕ:—

ಪವಿತ್ರಂ ಚರಣಂನೇಮಿಃ ಪವಿಶ್ಚಕ್ರಂ ಸುದರ್ಶನಂ
ಸಹಸ್ರಾರಂ ಪ್ರಾಕೃತಘ್ನಂ ಲೋಕಾಧಾರಂ ಮಹೌಜಸಂ
ಪರ್ಯಾಯಾ ವಾಚಕಾನ್ಯಸ್ಯ ಚಕ್ರಸ್ಯ ಪರಮಾತ್ಮನಃ

ಪದ ಝಂಪೆತಾಳ

ಪವಿತ್ರ ನಾಮವೆಂದೀಹತ್ತು ಪೆಸರು ಮಾ
ಧವ ಚಕ್ರಕೆ ಪರಿಯಾಯ ವಾಚಕವೆಂದು
ಶಿವನು ಪೇಳಿದ ತತ್ವ ಬಿಡುವರೆ ಮಾನವ
ಅವನರಿಯದರ್ಥ ವಿಸ್ಮಾವಬಲ್ಲ ೨೫

ಹರನ ಭಕ್ತಳೆಂಬ ಗಿರಿಜೆದೇವಿಗೆ ಪುರ
ಹರನೊಲಿದ ತತ್ವವ ಬಿಟ್ಟು
ನರಮಾತ ನಂಬಿ ಈಶ್ವರನುಕ್ತಿ ಜರೆವರೆ
ಮರುಳೆ ತಾಯಿಮಾರಿ ತೊತ್ತಕೊಂಬುವರೆ ೨೬

ಮುಕ್ಕಣ್ಣ ಪೇಳಿದರ್ಥವ ಬಿಟ್ಟು ಜಗದೊಳ
ಗಿಕ್ಕಣ್ಣನಾದ ಪಾಮರನು
ಸೊಕ್ಕಿ ಮನಬಂದಂತೆ ನುಡಿಯೆ ಮೃಡ ಘುಡಿಘುಡಿಸಿ
ರಕ್ಕಸರ ಕೊಲುವಂತೆ ಕೊಲುವ ೨೭

ಶ್ರುತಿ:—

ಯತ್ತ್ರೇ ಪವಿತ್ರಮರ್ಚಿಷ್ಯಗ್ನೇ ವಿತತ ಮಂತರಾ

ಪದ ರೂಪಕತಾಳ

'ಯತ್ರೇ ಪವಿತ್ರ ಮರ್ಚಿಷ್ಯಗ್ನೇ' ಎಂಬ ಶ್ರುತಿ
ಮತ್ತೆ ನಿನ್ನೊಬ್ಬನ ಸುಡದೆ
ಚಿತ್ತಜನ್ಮೈಯನ ಚಕ್ರ ಪವಿತ್ರದಿ
ತಪ್ತವಾದೀ ಭೂಷಣವು ೭೮

ಶ್ವೇತೋರ್ಧ್ವ ಹಿರಣ್ಮಯಂ ಎಂಬ ವೇದ ಮತಿವಂತರ
ಮತದಿಂದ ಚಕ್ರ ಒಪ್ಪುವದ್ಯೆಸೆ
ಸುತಗೆ ಸಾವರ್ಣನ ಪ್ರಕಾರದಂತ
ಚ್ಯುತನ ಮಹಿಮೆ ನೋಡು ಬಿಡುದುರಾಗ್ರಹವ ೭೯

ಶ್ಲೋಕ:—

ದದ್ಯಾದ್ಗೋಭೂ ಹಿರಣ್ಯಾನಿ ಚಕ್ರಾಂಕಿತ ಭುಜಾಯ ವೈ
ನಾವೈಷ್ಣವಾಯ ದಾತವ್ಯಂ ನೋದ ಬಿಂದುಂ ನತಂಡುಲಂ

ಪದ ರೂಪಕತಾಳ

ಗೋಭೂ ಹಿರಣ್ಯಾದಿ ದಿವ್ಯ ದಾನಂಗಳ
ಸ್ವಭುಜದಲ್ಲಿ ಚಕ್ರಾಂಕಿತ ಉಳ್ಳವಗೆ
ಈ ಭುವನದೊಳಗೆ ಕೊಡಬೇಕು ಎಂತೆಂದು ಸಾ
ಗ ಭೂಷಣನೆ ನಿರ್ಣೈಸಿದನೊ ೮೦

ಒಂದು ಬಿಂದೋದಕ ಒಂದು ತಂಡುಲವನ್ನು
ಇಂದಿರೇಶನ ಭಕ್ತನಲ್ಲದವನಿಗೆ
ಎಂದೆಂದು ಕೊಡಬಾರದೆಂದು ಚಂದ್ರಮೌಳಿ
ಎಂದವನಾಗಿ ಸಂದೇಹ ಸಲ್ಲ ೮೧

ಶ್ರುತಿ:—

ತಪ್ತ ಚಕ್ರಾಂ ದ್ವಿಜೇಧಾರ್ಯಾ
ದ್ವಿರೇಖಂ ಊರ್ಧ್ವ ಪುಂಡ್ರಂಕರೋತಿ
ಇಯಂ ಮಾಧ್ಯಂದಿನಾಯಶ್ರುತಿಃ

ಹನ್ನೆರಡನೆ ಖಂಡದಿ ತಪ್ತ ಚಕ್ರಧಾರಣೆ ನಿರ್ಣೈಸಿತು

ರಾಗ ಭೂಪಾಳಿ ರೂಪಕತಾಳ

ಇದು ಶಿಷ್ಟ ವಚನವಾದುದರಿಂದ ತಪ್ತ ಚ
ಕ್ರಧಾರಣೆಯಿಲ್ಲದವ ವೇದಬಾಹ್ಯ
ಮದನಸೈಯನ ಪುರದಿ ಮುಕ್ತರಿಗಿದು ಬೇಕು
ಇದ ನಂಧಂತಮುಕ್ಕೈದುವ ಜರೆವ ೩೨

ಶ್ಲೋಕ:—

ಏಕಂಠಲಗ್ನ ತುಳಸೀ ನಳಿನಾಕ್ಷ ಮಾಲಾ
ಏಬಾಹು ಮೂಲ ಪರಿಚಿಹ್ನಿತ ಶಂಖ ಚಕ್ರಾಃ
ಏವಾಲಲಾಟ ಫಲಕೇ ಲಸದೂರ್ಧ್ವ ಪುಂಡ್ರಾಃ
ತೇ ವೈಷ್ಣವಾ ಭುವನ ಮಾಶು ಪವಿತ್ರಯಂತಿ

ರೂಪಕತಾಳ

ಸಂತಪ್ತ ಚಕ್ರ ಶಂಖವ ಭುಜಯುಗದಲ್ಲಿ
ಮಂತ್ರ ಪೂರ್ವಕವಾಗಿ ಧರಿಸಿ
ಅಂತಕನ ಭಟರ ನಂಜಿಸಿ ಮೆರೆವ ಲಕ್ಷ್ಮಿ
ಕಾಂತನ ಭಜಕರೊಪ್ಪಿಹರು ೩೩

ಹೊಳೆವ ಹನ್ನೆರಡೂರ್ಧ್ವ ಪುಂಡ್ರಗಳಿಟ್ಟು ಶ್ರೀ
ತುಳಸೀ ಪದುಮಾಕ್ಷಿ ಸರವ
ಅಲಸದೆ ಧರಿಸಿದ ಪರಮ ವೈಷ್ಣವರು ಈ
ಇಳೆಯ ಪಾವನವ ಮಾಡುವರು ೩೪

ಏಕಾಂತಲಗ್ನ ಎಂಬ ಪದ್ಮಪುರಾಣ
ಶ್ಲೋಕದಿ ಗೌರಿ ದೇವಿಗೆ
ಶ್ರೀಕಂಠ ತಾನೆ ನಿರ್ಣೈಸಿ ಪೇಳಿದನಾಗಿ
ಲೋಕರ್ಗೆ ಸಂದೇಹ ಸಲ್ಲ ೩೫

ಬ್ರಹ್ಮ ಕ್ಷತ್ರಿಯ ವೈಶ್ಯ ಶೂದ್ರರು ತಮ ತಮ್ಮ
ಧರ್ಮ ಮಾರ್ಗದಲಿ ನಡೆಸಿದ
ಚಿನ್ಮಯ ರೂಪ ಎಲ್ಲರೊಳು ತಾನೆ ಪೊಕ್ಕು
ನಿರ್ಮಲ ಪಥಕ್ಕೆರಗಿಸಿದ ೩೬

ಬ್ರಹ್ಮಚಾರಿ ಗೃಹಸ್ಥ ವಾನಪ್ರಸ್ಥರ
ಧರ್ಮದಿ ವಿಪ್ರರ ನಡೆಸಿ
ನಿರ್ಮವು ಯತ್ಯಾಶ್ರಮದಿ ಮತ್ತವರನೆ
ನಮ್ಮ ನಾರಾಯಣ ನಡೆಸಿದ ೩೭

ಕಾಲ ಕಾಲದಿ ಮಳೆಯ ಕರೆಸಿದ ಇಳೆಯೊಳು
ಕಾಲ ಕಾಲದಿ ಬೆಳೆಯ ಬೆಳೆಸಿದ
ಕಾಲ ಕಾಲದಿ ಕಳುವ ನಿಲಿಸಿದ ಶ್ರೀಕೃಷ್ಣ
ಕಾಲ ಕಾಲದಿ ಫಲವ ಮೆಲ್ಲಿಸಿದ ೩೮

ವಿಧವೆಯರಿಲ್ಲ ಹರಿಪಾಲಿಸುವ ಕೃತಯುಗದಿ
ವಿಧುರರೆನಿಸುವ ನರರಿಲ್ಲ
ಮದುವೆಯಿಲ್ಲದವರಿಲ್ಲ ವಿಧಿಯ ವಿಚಾರುವರಿಲ್ಲ
ಅಧಮರೆನ್ನಿಸುವ ನರರಿಲ್ಲ ೩೯

ಬಂಜೆಯರಿಲ್ಲ ಪತಿಗಂಜದ ಸತಿಯರಿಲ್ಲ
ಸಂಜೆಯಲಿ ಮಲಗುವರಿಲ್ಲ
ಕಂಜನಾಭನ ಮರೆವ ಜನರಿಲ್ಲ ಅತಿಥಿಗಳು
ಭುಂಜಿಸದೆ ಉಂಬುವರಿಲ್ಲ ೪೦

ಅಂಧ ಪಂಗುಗಳಿಲ್ಲ ನೂರು ವರುಷಗಳಿಂ
ಕುಂದಿ ಬದುಕುವ ಜನರಿಲ್ಲ
ನಿಂದ್ಯ ಮಾರ್ಗದಿ ನಡೆವ ಜನರಿಲ್ಲ ನಮ್ಮ ಗೋ
ವಿಂದ ಪಾಲಿಸುವ ಕಾಲದಲಿ ೪೧

ಎಲ್ಲಿ ನೋಡಲು ತೀರ್ಥ ಕ್ಷೇತ್ರಂಗಳು ಮ
ತ್ತೆಲ್ಲಿ ನೋಡಲು ಯಜ್ಞಾದಿಗಳು
ಎಲ್ಲಾ ಕಡೆಯಲ್ಲು ದೇವತಾ ಪೂಜೆಯು
ಬಲ್ಲಿದ ಕೃಷ್ಣ ನಡೆಸಿದ ೪೨

ಎಲ್ಲಿ ನೋಡಲು ವೇದ ಘೋಷಣೆಗಳು ಮ
ತ್ತೆಲ್ಲಿ ನೋಡಲು ತಪಸ್ವಿಗಳು
ಎಲ್ಲಿ ನೋಡಲು ಧನ ಧಾನ್ಯಂಗಳು ಮ
ತ್ತೆಲ್ಲಿ ನೋಡಲು ಕೃಷಿ ವರ್ಧಕರು ೪೩

ಎಲ್ಲಿ ನೋಡಲು ದಾನ ಎಲ್ಲಿ ನೋಡಲು ಗಾನ
ಎಲ್ಲಿ ನೋಡಲು ಹರಿಯ ಧ್ಯಾನ
ಎಲ್ಲಿ ನೋಡಲು ಜ್ಞಾನ ಎಲ್ಲಿ ನೋಡಲು ಸ್ನಾನ
ಎಲ್ಲಿ ನೋಡಲು ವ್ಯಾಖ್ಯಾನ ೪೪

ಎಲ್ಲೆಲ್ಲಿ ನೋಡಲು ದಿವ್ಯ ದೇವಸ್ಥಾನ
ಎಲ್ಲೆಲ್ಲಿ ನೋಡಲು ರಥೋತ್ಸವ
ಎಲ್ಲಿ ನೋಡಲು ಮುತ್ತು ರತ್ನ ಪಸಾರಗಳು
ಎಲ್ಲಿ ನೋಡಲು ದಿವ್ಯ ನಗರಿ ೪೫

ಎಲ್ಲಿ ನೋಡಲು ಭಕ್ತಿ ಎಲ್ಲಿ ನೋಡೆ ವಿರಕ್ತಿ
ಎಲ್ಲಿ ನೋಡಲು ವಾದಶಕ್ತಿ
ಎಲ್ಲಿ ನೋಡಲು ಯುಕ್ತಿ ಎಲ್ಲಿ ನೋಡಲು ಭುಕ್ತಿ
ಎಲ್ಲಿ ನೋಡಲು ವಿಪ್ರವೃತ್ತಿ ೪೬

ಎಲ್ಲಿ ನೋಡಲು ಪರಿಪರಿಯಾಟಗಳು
ಎಲ್ಲಿ ನೋಡಲು ನೃತ್ಯ ವಾದ್ಯ
ಎಲ್ಲಿ ನೋಡಲು ಚಿತ್ರ ಭೂಷಣ ವಸನ
ಚೆಲ್ವ ಸಾರಿ ನರಸೊತ್ತಮ ೪೭

ಗಂಧ ಕಸ್ತೂರಿ ಕುಂಕುಮ ರಂಜಿಪ ರಸ
ದಿಂದ ಮಾಡಿದ ಓಕುಳಿಯ
ಚಂದದಿಂದೊಬ್ಬರೊಬ್ಬರ ಮೇಲೆ ಚೆಲ್ಲಿ
ನವಚಂದ್ರವದನೆಯರೊಪ್ಪಿದರು ೪೮

ಒಂದು ಗರ್ಭದ ಕೂಸು ಒಂದು ಶಿಶು ಮಡಲೊಳು
ಒಂದು ಬೆನ್ನಿಲಿ ಕಟ್ಟಿಕೊಂಡು
ಒಂದು ಮುಂದಾಡಿಸುವ ಇಂದು ಮುಖಿಯರ
ಸಂದಣಿಯು ಮನೆಮನೆಗಳಲ್ಲಿ ೪೯

ಒಳಗೆ ಮೊಸರ ಕಡೆವ ಸಂಭ್ರಮ ಹೊರಗೆ ಆ
ಕಳ ಕರೆವ ರಭಸ ತುಂಬಿಹುದು
ಅಳುವ ಮಕ್ಕಳ ತೊಟ್ಟಿಲೊಳಗಿಟ್ಟು ಪಾಡುವ
ಲಲನೆಯರ ಗಂಭೀರನಾದ ೫೦

ಯತಿಗಳ ಪೂಜೆ ವಿಪ್ರರ ಪೂಜೆ ಮನೆಮನೆಯೊ
ಳತಿಥಿ ಅಭ್ಯಾಗತರ ಪೂಜೆ
ಶ್ರುತಿ ವಿಹಿತ ನಿತ್ಯ ನೈಮಿತ್ತಿಕ ಕರ್ಮಗಳು
ವಿತತವಾದವು ಲೋಕದೊಳಗೆ ೫೧

ಗಂಡು ಮಕ್ಕಳ ಮದುವೆ ಮುಂಜಿಗಳ ಸಂದಣಿ
ತಂಡ ತಂಡದ ಕನ್ನಿಕೆಯರ
ಉಂಡುಟ್ಟು ಕೊಂಬುದಕೆ ಉಳ್ಳಂಥ ಮನೆಗಳ
ಕಂಡು ಕೊಡುವ ಸಂಭ್ರಮಗಳ ೫೨

ನವಗ್ರಹಹೋಮ ನಾಂದಿಯ ಪೂಜೆಯ ಮಾಳ್ಪ
　　ಭುವನ ದೇವರಿಗೆ ದಕ್ಷಿಣೆಯ
ತವಕದಿಂದಲಿ ಕೊಡುತ ಮಂಗಳಾರತಿಯನೆ
　　ತ್ತುವರರ್ಥಿಯಲಿ ಮುತ್ತೈದೆಯರು ೧೪೩

ಅಯುತಾಯುವೆಂಬ ಜೋಯಿಸರೋದುವ
　　ಪ್ರಿಯವಾದ ಮಂಗಳಾಷ್ಟಕ
ಆಯತಾಕ್ಷಿಯರ ಧವಳ ಶೋಭನಂಗಳ
　　ಗಾಯನ ತುಂಬಿತಂಬರವ ೧೪೪

ಮುತ್ತೈದೆಯರು ಬಂದು ಮುತ್ತು ರತ್ನಂಗಳ
　　ಅರ್ಥಿಯಲಿ ಭಿಕ್ಷವಿಕ್ಕುವರು
ತೆತ್ತಿಗರೆಲ್ಲರು ಉಡುಗೆರೆ ಉತ್ಸಹಗಳ
　　ಸುತ್ತಿಂದ ತಂದು ಕೊಡುವರು ೧೪೫

ಪರಿಪರಿ ಭಕ್ಷ್ಯ ರಸಾಯನಂಗಳ ಮಾಡಿ
　　ಪರಿಪರಿ ಕಲಸೋಗರಗಳ
ವಿರಚಿಸಿ ವಿಪ್ರರಕೂಡಿ ಭೂಮವನುಂಬು
　　ವರ ಸಂಭ್ರಮಗಳನೇನೆಂಬೆ ೧೪೬

ಮಂಗಳ ದೇವಿಯರಸ ವಧುವರರಿಗೆ
　　ಮಂಗಳವೀಯಲೆಂದೆಂದು
ತುಂಗ ಭಾಗ್ಯಂಗಳು ಸಂಗಡಿಸುತಿರಲೆಂದು
　　ಅಂಗನೆಯರು ಹರಸಿದರು ೧೪೭

ಚಕ್ರವರ್ತಿಗಳ ಪುಟ್ಟಿಸಿ ಕಾಲಕಾಲದಿ ಭೂ
　　ಚಕ್ರಪಾಲರ ಮಾಡಿಸಿದ
ವಿಕ್ರಮ ಅವರಿಗೆ ಕೊಟ್ಟು ಮತ್ತವರಿಂದ
　　ಸತ್ಕರ್ಮಂಗಳನೆ ನಡೆಸಿದ ೧೪೮

ಮತ್ಸ್ಯ ಕೂರ್ಮನಾಗಿ ಮತ್ತೆ ಮಹಿಯನೆತ್ತಿ
ಕೀರ್ತಿಯ ಪಡೆದ ಕಿಂಕರನ
ಮೃತ್ಯುವ ಬಿಡಿಸಿದ ಮತ್ತೆ ಬಲಿಯ ಕಿತ್ತು
ಕ್ಷತ್ರಿಯರುಕ್ಕ ತಗ್ಗಿಸಿದ ೨೯

ಸೀತೆಗಭಯವಿತ್ತು ಸೇತುಬಂಧನ ರಾಮ
ಮಾತುಳ ಕಂಸನ ಮಡುಹಿದ
ಖ್ಯಾತ ಬುದ್ಧನಾಗಿ ಕಾಪಥಗಳ ತೋರ್ದ
ಭೀತ ಕಲಿಯ ಬೀಳುಕೊಟ್ಟ ೩೦

ಶಿವನ ವೈರಿಯ ಕೊಂದ ಶ್ರುತಿಯನವನಿಗೆ ತಂದ
ಭುವನ ಪಾವನ ಭವ್ಯಕೀರ್ತಿ
ಇವನ ಪೋಲುವರಿಲ್ಲ ಈ ಜಗದೊಳಗೆಲ್ಲ
ಜವನ ಭಟರ ಜಡಿವಮಲ್ಲ ೩೧

ಇಂತು ಜಗಂಗಳ ಸಂತತ ಪೊರೆವನು
ಹಂತ ದೈತೇಯರ ಕೃತಾಂತ
ಚಿಂತೆಯ ನೆಗ್ಗೊತ್ತಿ ಸಂತೋಷವೀವ ಶ್ರೀ
ಕಾಂತ ಸಂತರ ಭಾರವಾಂತ ೩೨

ಸಕಲ ಸುಗುಣ ಪೂರ್ಣ ಸಜ್ಜನದಾತಾರ
ಭಕುತ ವತ್ಸಲ ಭವನಾಶ
ಸುಖ ಚಿನ್ಮಯಕಾರ ಶುದ್ಧ ದೋಷವಿದೂರ
ನಿಖಿಳೇಶ ನಿನ್ನ ನಂಬಿದೆನೊ ೩೩

ಉಂಬೋದುಡುವುದು ಲಕ್ಷ್ಮಿದೇವಿಯದು ತಲೆ
ಗಿಂಬಿಟ್ಟು ಮಲಗುವ ನೆಲನ
ಇಂಬು ಕುಂಭಿಣಿಯದು ಇವರಾಳ್ದನಲ್ಲೆಂಬ
ಡಂಭಕನೆಲ್ಲಿಹನೆಂತೆಂಬ ೩೪

ಉಂಡಮನೆಗೆ ಎರಡು ಬಗೆವ ಭಂಡರ ಕಂಡು
ಪಂಡಿತ ಜನರು ಮನ್ನಿಸರು
ಕಂಡಕಂಡರ ಮಾತು ಕೇಳದಲೆ ಬಲ್ಲವರು
ಪಾಂಡವ ಪ್ರಿಯನ ಮನ್ನಿಸಿರೋ ೧೫

ಆದರಿಂದ ಸಕಲ ವಾದಿಗಳು ನಾರಾಯಣನ
ಪದಪದುಮವ ನಂಬಬೇಕು
ಇದು ಪಕ್ಷಪಾತದ ನುಡಿಯಲ್ಲವೆಂಬೋದು
ಬುಧರು ತಾವೇ ವಿಚಾರಿಸಲಿ ೧೬

ಸೀತೆಗೆ ಚಿಂತಿಸಿ ಭೀತಿಯ ತೋರಿಸಿ
ಭೂತನಾಥನ ಯಾತ್ರೆ ಮಾಡಿ
ಪ್ರೀತಿಯಿಂ ಮುನಿಗಳಿಗೆ ನಮಿಸಿ ನಮಿಸಿ ಕೃಷ್ಣ
ದೈತೇಯರಿಗೆ ಮೋಹವಿತ್ತ ೧೭

ಬೈಯಲು ಈರೇಳು ಜಗವ ಬಾಯೊಳು ತೋರಿ
ಮೈಯೊಳು ವಿಶ್ವರೂಪವನು
ಕೈಯಲ್ಲಿ ಬೆಟ್ಟವನೆತ್ತಿ ಶ್ರೀಕೃಷ್ಣ
ಪ್ರಿಯರ್ಗೆ ಸುಜ್ಞಾನವಿತ್ತ ೧೮

ಮೊಲೆಯನೂಡಲು ಶಿಶುಪಾಲಕೊಂಬಂತೆ ಸ
ತ್ಕುಲಕೆ ಸಮ್ಯಜ್ಞಾನ ಬಂತು
ಜಲದೊಳಗೆ ಮೊಲೆಯ ಪಿಡಿದ ಜಿಗುಳಿಗಳಂತೆ
ಖಳರು ಕುತ್ಸಿಕಕ್ಕೆರಗಿದರು ೧೯

ಮಿಶ್ರ ಚರಿತ್ರದಿಂ ಮಿಶ್ರ ಜೀವರಿಗೆ ಸಂ
ಮಿಶ್ರ ಜ್ಞಾನವನೆ ಬೆರೆಸುವ
ವಿಸ್ಮಯವಲ್ಲದೆ ಮಾತನಾಡದೆ ಹರಿ
ಸ್ವಸ್ವಯೋಗ್ಯತೆ ಮತಿಯಿತ್ತ ೨೦

ಸೂತ್ರಭಾಷ್ಯೇ:—

ನಿತ್ಯಜ್ಞಾನಾನಂದ ಬಲಾದೇವಾಸ್ಯೈವಂತು ದಾನವಾಃ
ದುಃಖೋಪಲಬ್ಧಿ ಮಾತ್ರಾಸ್ತೇ ಮಾನುಷಾಸ್ತೂಭಯಾತ್ಮಕಾ
ತೇಷಾಂಯದನ್ಯಥಾಜಾತಂ ತದುಪಾಧಿಕೃತಂಮತಂ
ವಿಜ್ಞಾನೇನಾತ್ಮಯೋಗೇನ ನಿಜರೂಪವ್ಯವಸ್ಥಿತಂ
ಸರ್ವ್ಯಜ್ಞಾನಂತು ದೇವಾನಾಂ ಮಾನುಷಾಣಾಂವಿಮಿಶ್ರಿತಂ
ವಿಪರೀತಂಚದೈತ್ಯಾನಾಂ ಜ್ಞಾನಂತ್ರೇಧಾ ವ್ಯವಸ್ಥಿತಂ

ಪದ ರೂಪಕತಾಳ

ಸುಖದುಃಖ ರೂಪರು ಮಧ್ಯಮ ಜೀವರು
ಸುಖಮಾತ್ರ ರೂಪರುತ್ತಮರು
ಸುಖಹೀನ ದುಃಖರೂಪರು ಅಧಮ ಜೀವರು
ವಿಕೃತಿಯಿಲ್ಲಿದಕೆ ಎಂದೆಂದು ೭೧

ಈ ನಿತ್ಯ ಸುಖವೆ ಕೈವಲ್ಯ ಉತ್ತಮ ಮತಿಗೆ
ಆ ನಿತ್ಯ ದುಃಖಾಧಮರು
ಈ ನ್ಯಾಯದಿಂದ ಸ್ವರೂಪ ಸುಖ ದುಃಖವೆ
ಮಾನುಷ್ಯನಿಗೆ ನಿತ್ಯ ಬದ್ಧ ೭೨

ಲಿಂಗ ದೇಹವೆಂಬ ಪ್ರಾಕೃತ ದೇಹದ
ಸಂಗದಿಂದ ಸಂಸಾರದಲ್ಲಿ
ಕಂಗೊಳಿಸವು ಗಡ ಈ ಲಿಂಗ ದೇಹದ
ಭಂಗವಿಲ್ಲೆಂದು ತೋರುವುದು ೭೩

ಈಗಿದ್ದ ಸುಖದುಃಖ ಎಲ್ಲರಿಗೂ ಸರಿ
ಭಾಗವೆಂದೊಬ್ಬಬ್ಬರಿಗೆ
ಮೋಗುಂಬ ಸ್ವರೂಪ ಸುಖದುಃಖವೆ ಮಿಶ್ರ
ರಿಗು ಸಂಸೃತಿ ಆಗಬೇಕು ೭೪

ಸುಖದುಃಖವೆರಡು ಕೂಡಿಹುದು ಸಂಸಾರವೆಂದು
ಸಕಲ ಬುಧರಿಗೆ ಸಮ್ಮತವು
ಪ್ರಕೃತಿ ಹೋದಮೇಲೆ ಚಿದ್ರೂಪ ಸುಖದುಃಖ
ವ್ಯಕುತಿಯಾದುದಕೆ ಭಯವಿಲ್ಲ ೨೫

ಆದರಿಂದ ತನುಭೃತ್ಸ್ವಭಾವ ಸಂಪ್ರಾಪ್ತವೆಂಬೊ
ದಿದೆ ಮಿಕ್ಕುದೆಲ್ಲುಪಾಧಿಕಾ
ಬುಧರೆಲ್ಲ ನೋಡಿ ಈ ಫಲಕೆ ತುದಿಯೊಳು ತ್ರಿ
ವಿಧರಿಗೆ ಲಿಂಗ ಭಂಗಬೇಕು ೨೬

ಅಲ್ಲವಿದ್ದರೆ ಜೀವ ತ್ರಿವಿಧ ಸ್ವಭಾವಕ್ಕೆ
ಕಲ್ಲು ಹಾಕಿದವ ಕೋವಿದನೆ
ಅಲ್ಲಿ ಇಲ್ಲಿ ಇಲ್ಲವೆಂದು ಪೇಳುವ ಜನರು
ಬಲ್ಲರೆ ಇದರ ಭಾವವನು ೨೭

ಬಲ್ಲಿದ ಹರಿಗೆ ವೃಥಾಸೃಷ್ಟಿ ಸಲ್ಲದು
ಛಲವ್ಯಾತಕೆ ಮಾನವನಿಗೆ
ಸೆಲ್ಲಿಪೋಪುದೆ ಬರಿದೆ ಅವರು ಆದಿಕಾಲ
ದಲ್ಲಿ ಮಾಡಿದ ಸಾಧನಗಳು ೨೮

ಮೂರುವಿಧ ಸಾಧನದಿಂದ ಮೂವರಿಗು
ಬೇರಬೇರೆ ಫಲಬೇಕು
ಓರಂತೆ ಶಾಸ್ತ್ರದಲೆಂಬಾ ಶ್ರುತಿಗೆ ಹಾನಿ
ಬಾರದಿರದು ಇಂತಲ್ಲದಿರೆ ೨೯

ಭಕ್ತಿ ದ್ವೇಷಗಳಿಗೆ ಫಲವುಂಟೆಂಬುದು ವೇದ
ದುಕ್ತಿ ಮಧ್ಯಮ ಜೀವರಲ್ಲಿ
ವ್ಯರ್ಥವಾದರೆ ಶ್ರುತಿ ಅರ್ಥವು ಕೆಡುವುದು
ನಿತ್ಯ ಶ್ರುತಿಯು ಕೆಡಿಸದಿರು ೩೦

ಆದರಿಂದ ತ್ರಿವಿಧ ಜೀವರಿಗು ಲಿಂಗದೇಹ
ತುದಿಯಲ್ಲಿ ಹೋಹದೆಂಬುವುದು
ವಿಧುಗಳಿಗೆ ಸಮ್ಮತವಿದನರಿಯದ ಮೂಢ
ವದರಿದರೇನು ಫಲವಹುದು ೮೧

ತತ್ವಜ್ಞಾನ ಮಿಶ್ರಜ್ಞಾನ ಮಿಥ್ಯಾಜ್ಞಾನ
ವ್ಯಕ್ತಿಯಿಂದ ಲಿಂಗದೇಹ
ಉತ್ತಮ ಮಧ್ಯಮಾಧಮ ಜೀವರೊಳು ಪೊಕ್ಕು
ಮತ್ತೆ ತ್ರಿವಿಧ ಭೋಗಬಹುದು ೮೨

ವಿರಜೆಯೆಂಬ ಪುಣ್ಯ ನದಿಯಿಂದ ಕೆಲವರಿಗೆ
ಪರಿದುಪೋಪುದು ಲಿಂಗದೇಹ
ಉರಗನ ಹೆಡೆಯಂತೆ ಜ್ಞಾನ ಪಕ್ವವಾಗೆ
ಇರಲರಿಯದು ಕೆಲಬರಿಗೆ ೮೩

ಜ್ಞಾನಕ್ಕೆ ಹಿರಿಯತನ ಕೊಡಬೇಕು ಎಂತೆಂದು
ಶ್ರೀನಾಥ ವಿರಜಾ ನದಿಯಲ್ಲಿ
ಜ್ಞಾನಿಗಳ ಮುಳುಗಿಸಿ ಮುಕ್ತರಮಾಡಿ ತ
ನ್ನಾನು ರಾಗದೊಳು ಕೂಡಿಕೊಂಬ ೮೪

ಹೀನರಿಗೆ ಮೈಲಿಗೆಯ ವಸ್ತ್ರಪೋದರೆ ಸಾಕು
ಸ್ನಾನವವರಿಗೆ ಬೇಡ ಬೇಡ
ಜ್ಞಾನಿಗಳಿಗೆ ವಸ್ತ್ರ ಪೋದಮೇಲೆ ಶುದ್ಧ
ಸ್ನಾನ ಬೇಕೆಂದು ಪ್ರಸಿದ್ಧ ೮೫

ಇಂತು ಶ್ರೀಕಾಂತ ಮೂವರಿಗೂ ಮೂರುಗತಿ
ಯೆಂತು ತುದಿಯಲಿ ಕೊಡುವನು
ಸಂತತ ಮಧ್ಯಮಾಧಮ ಲೋಕದಲ್ಲಿವರು
ಅಂತರಂತರದಿ ತುಂಬಿಹರು ೮೬

ಶ್ಲೋಕ: —

ಕಾಲೋಯಂದ್ವಿಪರಾರ್ಧಾಖ್ಯೋ
ನಿಮೇಷ ಉಪಚರ್ಯತೇ
ಅವ್ಯಕ್ತ ಶಾಯಿನಂತಸ್ಯ
ಅನಾದೇರ್ಜಗದೀಶಿತುಃ

ಪದ ರೂಪಕತಾಳ

ಒಮ್ಮೆ ಕಣ್ಣುಮುಚ್ಚಿ ತೆರೆಯುವ ಕಾಲದಿ
ಜನ್ಮ ಮರಣವನೈದುವ
ಬ್ರಹ್ಮಾದಿ ಜೀವರ ಹರಿಗೆ ಸರಿಯೆಂಬ
ದುರ್ಮತದವರ ನೇನೆಂಬೆ ೮೭

ಹರಿಗಿದು ನಿಮಿಷವು ಉಪಚಾರಿಕವೆಂದು
ಸಿರಿ ಭಾಗವತ ಪೇಳಿತಾಗಿ
ಭರದ ನಿಮಿಷವಿದೆಲ್ಲವಾದರೆ ಕಾಲ
ದಿರವನರಿವ ಕವಿಯಾವ ೮೮

ಅಂತಾದಿ ಯಿಲ್ಲದೆಲೆ ಸಂತತ ಸುಖಿಸ ನಿ
ಶ್ಚಿಂತ ಆದಿನಾರಾಯಣಗು
ಇಂತು ಪರಂತಾದಿ ಅಳಿದಳಿದು ಹೋಹರಿಗು
ಅಂತರವ ನೀವೆ ನೋಡಿ ೮೯

ಹರಿಯೆ ಸರ್ವೋತ್ತಮ ಹರಿಯೆ ಪರದೇವತೆ
ಹರಿಯೆ ಸಕಲ ವೇದ ವೇದ್ಯ
ನಿರುಪಮ ಸತ್ಕೀರ್ತಿ ನಿತ್ಯ ನಿರ್ಮಲಮೂರ್ತಿ
ಸುರ ಚಕ್ರವರ್ತಿ ಜಯ ಜಯತು ೯೦

ಶ್ರೀ ಹಯವದನ ಆಶ್ರಿತ ಜನಮೋದನ
ಮೋಹಾಂಧಕಾರ ಮಾರ್ತಾಂಡ
ಸೋಹಂ ಎಂದವರಿಗೆ ಶೋಕವನೀವ ನಿ
ರಹಂಕಾರಿಗಳ ರಕ್ಷಿಸುವ ೯೧

ಮುತ್ತು ರತ್ನಂಗಳ ಕೆತ್ತಿಸುವಂತೆ ಸು
ತತ್ವ ಸಾರಗಳ ಬಿತ್ತರವ
ಯುಕ್ತಿಯಿಂದಲಿ ಪೇಳ್ದ ವಾದಿರಾಜನ ಕೃತಿಯೊ
ಳರ್ಥಿಯ ಚತುರ್ಥಸಂಧಿ ೯೨

ಶ್ರೀಧರ ಹಯವದನ ರಾಯನ ದಯದಿಂದ
ವಾದಿರಾಜೇಂದ್ರ ವಿರಚಿಸಿದ
ಈ ದಿವ್ಯ ಕಾವ್ಯದಿ ಸ್ಥಿತಿಯನೊರೆವ ರಮ್ಯ
ವಾದ ತುದಿಯ ಸಂಧಿ ಪೊಸಬಗೆ ೯೩

ಇಂತು ಶ್ರೀಮದ್ವಾದಿರಾಜ ಪೂಜ್ಯಚರಣ ವಿರಚಿತಮಪ್ಪ
ವೈಕುಂಠ ವರ್ಣನೆಯೊಳು ನಾಲ್ಕನೆಯ ಸಂಧಿ
ಸಮಾಪ್ತವಾದುದು

ಶ್ರೀ ಕೃಷ್ಣಾರ್ಪಣಮಸ್ತು

## ಫಲಶ್ರುತಿ

ಈ ಪದವೆ ಶುಭಪದ ಈ ಪದವರ್ಥಿಯಪದ
ಈ ಪದ ಸಂಪದಾಸ್ಪದ
ಈ ಪದ ಹರಿಪಾದ ದೀಪವೆನಿಪ ಪದ
ಈ ಪದವೆ ಆಪದಾಂತಕ ಪದ ೧೪

ಭಯವ ಪರಿಹರಿಸುವಪದ ನಯವ ತೋರುವ ಪದ
ಪ್ರಿಯ ಮುಕ್ತಿಪದವನೇರಿಸುವ
ಹಯವದನ ರಾಯನ ಪ್ರಿಯಕೆ ಪಾತುರನಾಗಿ
ಜಯಿಸುವ ವಾದಿರಾಜನ ಪದ ೧೫

ಆಯುಷ್ಯ ಹೆಚ್ಚಲಿ ಶ್ರೀಯರಸ ಮೆಚ್ಚಲಿ
ಶ್ರೇಯೋ ಮಾರ್ಗವನು ನೆಚ್ಚಲಿ
ಮಾಯ ಬೆಚ್ಚಲಿ ಸುಜನರಾಯಾಸ ಬಿಚ್ಚಲಿ
ಬಾಯಮುಚ್ಚಲಿ ಕುತರ್ಕಿಗಳ ೧೬

ಭಕುತರೊಳಿಡಲಿ ಮುಕುತಿಯ ಬೇಡಲಿ
ಸುಖದ ರಾಸಿಗಳ ನೋಡಲಿ
ಏಕೃತಿಗಳೋಡಲಿ ಸುಕೃತರೆ ಕೂಡಲಿ
ಅಖಿಳರೀಕೃತಿಯ ಪಾಡಲಿ ೧೭

ನೆನೆವೆ ನಾರಾಯಣನ ನೆನೆವೆ ನಾರಾಯಣಿಯ
ನೆನೆವೆ ನಾರೇಯಣನ ಕುವರರ
ನೆನೆವೆ ಹರಿವಾಹನನ ನೆನೆವೆ ಹರಿಮಂಚವ
ನೆನೆವೆನು ಹರಮುಖ್ಯ ಸುರರ . ೧೮

ಇಂತಪ್ಪ ಹರಿಲೀಲೆ ದಶದಿಶ ಮುಟ್ಟಲಿ
ಸಂತರ ಭಯಗಳಟ್ಟಲಿ
ಚಿಂತೆಗಳ್ಕಟ್ಟಲಿ ಕೃತಾಂತನವರಟ್ಟಲಿ
ಸಂತತ ಖಳರ ಮೆಟ್ಟಲಿ ೯೯

ಈ ದಿವ್ಯಕೃತಿ ಕಮಲ ಕೃಷ್ಣಾರ್ಪಿತವಾಗಲಿ
ಶ್ರೀದೇವಿಯಿದನೆ ಕೈಪಿಡಿದು
ಮೋದದಿ ಸದಮಲ ಸಂಪದವೀಯಲಿ
ವಾದಿರಾಜ ಯೋಗಿವರಗೆ ೧೦೦

ಅದುಭುತವಲ್ಲವೆ ಹಯವದನ ತನ್ನ ಶ್ರೀ
ಪದ ಪದುಮ ಸನ್ನಿಧಿಯಲ್ಲಿ
ಹುದುಗಿಸಿ ವಾದಿರಾಜನ ಪಾದೋದಕದಿ ವಿ
ವಿಧ ಭೀತಿಯ ನೊದೆದಟ್ಟುವುದು ೧೦೧

ಭೂತ ಪ್ರೇತಗಳಿವನ ಪಾದೋದಕ ಭೀತಿಗೆ
ಕಾತರಿಸಿ ದಶದಿಶಗೋಡುವವು
ಪ್ರೀತಿಯಿಂದಲಿ ಜನರು ಕೊಡುವ ಕಾಣಿಕೆಗೆ ಶ್ರೀ
ನಾಥನು ಜನರ ಸಲಹುವನು ೧೦೨

ಜನ್ಮಾಂತರ ಋಣದಿ ಕರ್ಮ ಭೂಮಿಯೊಳು
ಬೊಮ್ಮ ರಕ್ಕಸನಾಗಿ ಜನಿಸೆ
ಅಮ್ಮಮ್ಮ ಈ ಮುನಿಗೆ ಹಣವವರಿಂದ ಕೊಡಿಸಿ
ತಮ್ಮ ಋಣ ಸಂತೆಂದೊಪ್ಪುವುದು ೧೦೩

ದೇಶ ದೇಶದಿಂದ ಕಪ್ಪ ಕಾಣಿಕೆಗಳ
ಆ ಸರ್ವೋತ್ತಮ ತಾನೆ ತರಿಸಿ
ಸ್ವಸೇವಕನ ಕೈಯ ರಥೋತ್ಸವ ಮಾಡಿಸಿ
ಭಾಸುರ ಯಶವ ತಂದಿತ್ತ ೧೦೪

ವಾಗೀಶ್ವರಿ ದೇವಿ ವದನವಿ ನೆಲೆಸಿ ಸ
ರ್ವಾಗಮ ತತ್ವ ಸಾರವನು
ಯೋಗಿಗಳೆಲ್ಲರು ತಲೆದೂಗುವಂದದಿ
ಆವಾಗಲಿವಗೊಲಿದಿಹರು ೧೦೫

ಇಳೆಗೆ ಇಟ್ಟ ಚೆಂಡು ಪುಟವೆದ್ದು ವ್ಯೋಮದ
ತಳಕೇರಿ ವದಗಿ ಇಮ್ಮಡಿಸಿ
ಪೊಳೆವಂತೆ ವೈಷ್ಣವರು ಖಳರಿಗಳುಕದೆ ಹರುಷ
ಒಲವಿಂದ ದಿನದಿನ ಹೆಚ್ಚುವರು ೧೦೬

ಕಣ್ಣು ಕಾಣದ ಬಲು ಜೀರ್ಣ ದೇಹದವನ
ಮುನ್ನ ತಿದ್ದಿ ಮಂಗಳವಿತ್ತು
ಉನ್ನಂತ ಕೀರ್ತಿಯ ಜಗದೊಳು ತುಂಬಿಸಿದ
ಪ್ರಸನ್ನ ಹಯವದನನಿಗೆ ಎಣೆಯೇ ೧೦೭

ಇನ್ನು ಹಯವದನ ಎನ್ನಿಹ ಪರಗತಿಗೆ
ನಿನ್ನ ಕಾರುಣ್ಯ ಕಾರಣವೊ
ಅನ್ಯಥಾವರಿಯೆ ಶರಣ್ಯ ನೀ ಕೈ ಪಿಡಿದು
ಎನ್ನ ರಕ್ಷಿಪುದು ನಿನ್ನದು ೧೦೮

ತತ್ವಸಾರದ ಸೊಬಗಿನ ಸೋನೆಯನು ಹರಿ
ಭೃತ್ಯನೆನಿಪ ವಾದಿರಾಜ
ಭಕ್ತಿ ಭರಿತನಾಗಿ ಪೇಳಿದನಿದ ಕೇಳಿ
ಸತ್ಸಭೆ ಸಂತೋಷಿಸಲಿ ೧೦೯

ಇದು ಪುಣ್ಯಕಥೆ ಲೋಕಕ್ಕಿದೆ ಮುಕುತಿಯ ಪಥ
ಇದ ಕೇಳುವವನೆ ಕೃತಾರ್ಥ
ಇದು ಸರ್ವಸಾಧನ ವಿಧುಗಳಿಗೆ ಸಮ್ಮತ
ಮುದವ ನೀವುದು ಕೇಳ್ವಜನಕೆ ೧೧೦

ಮೊದಲ ಸಂಧಿಗೆ ನೂರನಾಲ್ವತ್ತು ಪದಗಳು
ಪದಗಳೈವತ್ತು ದ್ವಿತಿಯಕೆ
ಅದರಮೇಲಣ ಸಂಧಿ ಪದಗಳೆಂಭತ್ತೆರಡು
ತುದಿಯಸಂಧಿಗೆ ನೂರ್ಹನ್ನೊಂದು ೧೧೧

ಇಂತು ಮೂನ್ನೂರ ಎಂಭತ್ತೆಂಟು ಪದಗಳು
ಸಂತೋಷದಿ ವಾದಿರಾಜ
ಅಂತರಂತರ ಪ್ರಮಾಣ ಶ್ಲೋಕಂಗಳ
ತಿಂಥಿಣಿಯ ಕೂಡಿ ಮಾಡಿದನು ೧೧೨

ಇತಿ ಶ್ರೀ ವಾದಿರಾಜ ಪೂಜ್ಯಚರಣ ವಿರಚಿತ
ಶ್ರೀ ವೈಕುಂಠ ವರ್ಣನಂ ಸಂಪೂರ್ಣಂ

ಶ್ರೀ ಕೃಷ್ಣಾರ್ಪಣಮಸ್ತು

